ಪ್ರಕಟನೆಯ ೨೯ ನೆಯ ವರ್ಷ : ೧೯೯೪

# ಸಂಕ್ರಮಣ

೨೫೯

---

ಡಾ. ಎಂ. ಎಂ. ಕಲಬುರ್ಗಿ

ಸ್ವಾತಂತ್ರ್ಯ ಚಳುವಳಿ ಸಂದರ್ಭ
ಮತ್ತು ಆಧುನಿಕ ಕನ್ನಡ ಸಾಹಿತ್ಯ

ಡಾ ಹಿ. ಶಿ. ರಾಮಚಂದ್ರೇಗೌಡ

ಕನ್ನಡ ಸಂಸ್ಕೃತಿ ಮತ್ತು ಕನ್ನಡ ವಿಶ್ವವಿದ್ಯಾಲಯ

ಡಾ. ಶಿವರಾಮ ಪಡಿಕ್ಕಲ್

ಎಸ್. ಶಿವಾನಂದರ 'ವಿಮರ್ಶೆಯ ಸವಾಲುಗಳು'

ಪ್ರತಿಕ್ರಿಯೆಗಳು, ಪುಸ್ತಕ ವಿಮರ್ಶೆ....

ಬಿ. ಎಸ್. ದುಂಡರಡ್ಡಿ, ಬಿ. ಟಿ. ಲಲಿತಾ ನಾಯಕ, ಎಚ್. ನಾಗರಾಜಪ್ಪ,
ವಿ ಆಂಜನೇಯ, ಕುವಿಪ್ರ ಇವರ ಕವನಗಳು

ಚಂಪಾಕಾಲಂ

ಪ್ರಗತಿಪರ ಚಳುವಳಿಗಳು : ಒಂದು ಇನ್ನೋಟ

---

ಸಂಪುಟ ೨೯ : ಸಂಚಿಕೆ ೩ ಮಾರ್ಚ ೧೯೯೪

# ಸಂಕ್ರಮಣ

ಮಾರ್ಚ್ ೧೯೯೪

ಸಂಪುಟ ೨೯ : ಸಂಚಿಕೆ ೩

ಸಂಪಾದಕಿ
ನೀಲಾ ಪಾಟೀಲ

ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



**SANKRAMANA 259**
A Monthly in Kannada
March 1994 Vol. XXIX No 3
Sankramana Prakashana Dharwad-580 001 Phone : 40509
Printed at Chandana Mudrana, Dharwad-8 Phone : 44863
Annual Subscription : Rs. 50/-

# ಪ್ರಗತಿಪರ ಚಳುವಳಿಗಳು : ಒಂದು ಇನ್ನೋಟ

ಚಂದ್ರಶೇಖರ ಪಾಟೀಲ

ಮುಂದಿನ ನೋಟಕ್ಕೆ 'ಮುನ್ನೋಟ' ಅನ್ನುತ್ತಾರೆ ; ಹಿಂದಿನ ನೋಟಕ್ಕೆ ಹಿ'ನ್ನೋಟ' ಅನ್ನುತ್ತಾರೆ. ಹಾಗಾದರೆ ಇಂದಿನ ನೋಟಕ್ಕೆ 'ಇನ್ನೋಟ' ಅನ್ನಬಾರದೇಕೆ ?

ಇಂದು ಎಂಬುದು ಹಿಂದು – ಮುಂದುಗಳ ಸಂಧಿ ಕಾಲ ; ವರ್ತಮಾನದ ಒಂದು ಬಿಂದುವಿನಲ್ಲಿ ನಿಂತಾಗ ನಡೆದು ಬಂದ ದಾರಿಯೂ ಕಾಣುತ್ತದೆ ; ಆ ದಾರಿ ಮುಂದೆ ಹಿಡಿಯಬಹುದಾದ ಗತಿಯನ್ನೂ ನಾವು ಊಹಿಸಬಹುದಾಗಿದೆ. ಭೂತದ ಅನುಭವದ ಆತ್ಮಾವಲೋಕನದ ಹಿನ್ನೆಲೆಯಲ್ಲಿ ಭವಿಷ್ಯದ ನಕಾಶವನ್ನು ನಾವು ಬರೆಯಲು ಸಾಧ್ಯವಾಗುವುದು ಈ 'ಇನ್ನೋಟ'ದ ನೆಲೆಯಿಂದ ಸಾಧ್ಯ.

ಇಂಥ ಒಂದು ಇನ್ನೋಟದ ಪ್ರಯತ್ನ ಇತ್ತೀಚೆಗೆ (೧೩ ಮಾರ್ಚ್ ೧೯೯೪) ಚಿತ್ರದುರ್ಗದಲ್ಲಿ ಒಂದು ವಿಚಾರ ಸಂಕಿರಣದಲ್ಲಿ ನಡೆಯಿತು. ಸಂಕಿರಣದ ವಿಷಯ : **ಕರ್ನಾಟಕದಲ್ಲಿ ಪ್ರಗತಿಪರ ಚಳುವಳಿ : ಒಂದು ಅಭ್ಯಾಸ.** ಕುವೆಂಪು ವಿಶ್ವವಿದ್ಯಾಲಯದ ಪ್ರಸಾರಾಂಗ ಮತ್ತು ಚಿತ್ರದುರ್ಗ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತು ಜಂಟಿಯಾಗಿ ಹಮ್ಮಿಕೊಂಡ ಈ ಕಾರ್ಯಕ್ರಮದಲ್ಲಿ ನಾನು ಪಾಲುಗೊಂಡದ್ದು, ಸಮಾರೋಪ ಭಾಷಣಕಾರನಾಗಿ. ಇಂಥ ಸಂದರ್ಭಗಳಲ್ಲೆಲ್ಲ 'ಸಮಾರೋಪ ಸ್ಪೆಶಲಿಸ್ಟ್' ಎಂದೇ ಕುಖ್ಯಾತನಾದ ನನ್ನನ್ನು ಸಮಾರೋಪಕ್ಕೆ ಆಮಂತ್ರಿಸುವುದರ ಹಿಂದೆ, ಕಾರ್ಯಕ್ರಮದುದ್ದಕ್ಕೂ ನಾನು ಕುರ್ಚಿಯಲ್ಲಿ ಕುಕ್ಕರಿಸಿ ನೋಟ್ಸ ಮಾಡಿಕೊಳ್ಳುವಂತೆ ಮಾಡುವ ಹುನ್ನಾರ ಇರುವುದು ನನಗೆ ಗೊತ್ತು. ಇದು ನನಗೆ ಪ್ರಿಯವಾದ ಕಾಯಕವೂ ಹೌದು.

*

ಉತ್ಸಾಹಿ ಗೆಳೆಯ ಚಿತ್ರಲಿಂಗಸ್ವಾಮಿ ಎಲ್ಲರನ್ನೂ ಸ್ವಾಗತಿಸಿದ ನಂತರ ಪ್ರಸಾರಾಂಗದ ಸಹನಿರ್ದೇಶಕ ಡಾ. ಕೇಶವ ಶರ್ಮ ವಿಚಾರ ಸಂಕಿರಣದ ಆಶಯವನ್ನು ವಿವರಿ

ಸಿದರು ನಮ್ಮ ದೇಶದ ಉತ್ಪನ್ನದ ಸಿಂಹಪಾಲನ್ನು ಕಬಳಿಸುತ್ತಿರುವ ನಮ್ಮ ಯುನಿವರ್ಸಿಟಿಗಳು ನಮ್ಮ ಬದುಕಿನ ಪ್ರವಾಹಕ್ಕೆ ಯಾವ ರೀತಿಯಲ್ಲೂ ಸ್ಪಂದಿಸದೆ ದ್ವೀಪಗಳಾಗಿ ಕಂಗೊಳಿಸುತ್ತಿರುವ ದುರಂತವನ್ನು ಎತ್ತಿ ಹೇಳಿದ ಶರ್ಮ, ಇಂಥ ದೊಂದು ಸಮಕಾಲೀನ ವಿಷಯದ ಬಗ್ಗೆ ಕುವೆಂಪು ವಿಶ್ವವಿದ್ಯಾಲಯದ ಪ್ರಸಾರಾಂಗ ಸಂವಾದ ಏರ್ಪಡಿಸಿದ್ದರ ಮಹತ್ವವನ್ನು ಎತ್ತಿ ತೋರಿಸಿ, 'ಚರ್ಚೆಗಾಗಿ ಆಹ್ವಾನಿ ಸಲ್ಪಟ್ಟವರು ಅಕೆಡಮಿಕ್ ಆಯಾಮದವರಾಗಿರದೆ ನೇರವಾಗಿ ಚಳುವಳಿಯಲ್ಲಿ ಪಾಲು ಗೊಂಡವರೇ ಆಗಿದ್ದಾರೆ' ಎಂದು ಹೇಳಿದರು. ಮುಂದೆ ನಡೆದ ಎರಡು ಗೋಷ್ಠಿ ಗಳುದ್ದಕ್ಕೂ ನಡೆದ ಬಿಸಿ ಬಿಸಿ ಚರ್ಚೆ ಶರ್ಮರ ಮಾತಿಗೆ ಕನ್ನಡಿ ಹಿಡಿಧಂತಿತ್ತು. ವಿಚಾರ ಸಂಕಿರಣವನ್ನು ಉದ್ಘಾಟಿಸಿದವರು ಎಸ್. ಜೆ ಎಂ. ಶಿಕ್ಷಣ ಸಂಸ್ಥೆಗಳ ಆಡಳಿತಾಧಿಕಾರಿ ಶ್ರೀ ಎಸ್ ಕೆ. ಬಸವರಾಜನ್. ಸ್ವಲ್ಪೇ ಮಾತಾಡಿದರೂ ಕೂಡ ಅವರು. ನೊಂದವರಿಗೆ ದನಿ ಕೊಡುವ ನಮ್ಮ ಜನಪರ ಚಳುವಳಿಗಳು ಒಮ್ಮೊಮ್ಮೆ ಅನಾಯಕತ್ವ, ಒಳಜಗಳಗಳಿಂದಾಗಿ, ಮತ್ತೊಮ್ಮೆ ರಾಜಕಾರಣಿಗಳ ಪಿತೂರಿ ಯಿಂದಾಗಿ ಉಳಿಗುಂದುವ ವಾಸ್ತವವನ್ನು ಎತ್ತಿ ತೋರಿಸುತ್ತ ಬಸವ – ಮಾರ್ಕ್ಸ್ – ಲೋಹಿಯಾ – ಅಂಬೇಡ್ಕರರ ಪ್ರಗತಿಪರ ವಿಚಾರಧಾರೆಗಳನ್ನು ಮೈಗೂಡಿಸಿಕೊ ಳ್ಳುವ ಅಗತ್ಯವನ್ನು ಬಿಂಬಿಸಿದರು. ಪ್ರಸಾರಾಂಗದ ನಿರ್ದೇಶಕ ಡಾ. ಪಂಚಾಕ್ಷರಯ್ಯ ಕರ್ನಾಟಕದ ಸಂದರ್ಭದಲ್ಲಿ ನಮ್ಮ ವೀರಶೈವ ಸಂಸ್ಥೆಗಳು ಹೇಗೆ ಅರ್ಥಪೂರ್ಣವಾಗಿ ನಮ್ಮ ಪ್ರಗತಿಪರ ಚಳುವಳಿಗಳಿಗೆ ಪೂರಕವಾಗಿ ಕೆಲಸ ಮಾಡುತ್ತಿವೆ ಎಂಬುದನ್ನು ಸೂಚಿಸಿದರು.

೧೯೭೦ರ ದಶಕವನ್ನು ನಮ್ಮ ರಾಜ್ಯದ ಮಟ್ಟಿಗೆ ಚಳುವಳಿಗಳ ದಶಕವೆಂದೇ ಹೇಳ ಬೇಕು. ಕುವೆಂಪು ಮಾರ್ಗದರ್ಶನದಲ್ಲಿ ಲೋಹಿಯಾವಾದಿಗಳ ಸಮಾಜವಾದಿ ಯುವಜನಸಭಾ ಪ್ರಾರಂಭಿಸಿದ ಜಾತಿವಿನಾಶ ಚಳುವಳಿ, ದಲಿತ ಸಂಘರ್ಷ ಸಮಿತಿಯ ಹುಟ್ಟು, ಜೆ ಪಿ. ಆಂದೋಲನ ಮುನ್ನಡೆಸಿದ ನವನಿರ್ಮಾಣ ಸಮಿತಿ, ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ, ಕಮ್ಯುನಿಸ್ಟ್ ವಿಚಾರಧಾರೆಯ ಪ್ರಗತಿ ಪಂಥ, ಅಬ್ರಹಾಂ ಕೋವೂರರ ವೈಚಾರಿಕ ಆಂದೋಲನ, ಬಂಡಾಯ ಸಾಹಿತ್ಯ ಸಂಘಟನೆಯ ಪ್ರಾರಂಭ, ರೈತ ಚಳುವಳಿ ಇವೆಲ್ಲ ಆ ದಶಕಕ್ಕೆ ವಿಶಿಷ್ಟ ಸಾಂಸ್ಕೃತಿಕ ಮಹತ್ವ ಒದಗಿಸಿದ ಘಟನೆಗಳು. ಸಂಗತಿಗಳು. ೮೦ ಮತ್ತು ೯೦ ರ ದಶಕಗಳಲ್ಲಿ ಇವೆಲ್ಲ ಚಳುವಳಿಗಳ ಮುಂದುವರಿಕೆಯನ್ನು, ಏಳು ಬೀಳುಗಳನ್ನು ನಾವು ಕಾಣುತ್ತಿ ದ್ದೇವೆ. ಸದ್ಯದ ಹಂತದಲ್ಲಿ ಇವೆಲ್ಲ ದಣಿದುಕೊಂಡು, ಏದುಸಿರು ಬಿಡುತ್ತಿರುವಾಗ ಈ ಪ್ರಗತಿಪರ ಚಳುವಳಿಗಳ ಬಗ್ಗೆ ಒಂದು ವಿಚಾರ ಸಂಕಿರಣವನ್ನೇ ಏರ್ಪಡಿಸಿದ್ದು ಕುವೆಂಪು ವಿಶ್ವವಿದ್ಯಾಲಯಕ್ಕೆ, ಉಳಿದ ವಿಶ್ವವಿದ್ಯಾಲಯಗಳಿಗೆ ಇಲ್ಲದ ಒಂದು

ಹಿರಿಮೆಯನ್ನು ತಂದುಕೊಟ್ಟಿದೆ. (ಕಳೆದ ವರ್ಷ 'ಬಂಡಾಯ ಸಾಹಿತ್ಯ'ದ ಬಗ್ಗೆ ಒಂದು ವಿಚಾರ ಸಂಕಿರಣ ಮಾಡಿದ ಕೀರ್ತಿಯೂ ಕುವೆಂಪು ವಿ. ವಿ. ಯದೇ ಎಂಬುದನ್ನು ನೆನಪಿಡಬೇಕು).

*

ಮೊದಲ ಗೋಷ್ಠಿಯಲ್ಲಿ, 'ಕರ್ನಾಟಕದಲ್ಲಿ ರೈತ ಚಳುವಳಿಗಳ ಸ್ವರೂಪ'ದ ಬಗ್ಗೆ ಮಾತಾಡಿದ ಶ್ರೀ ಕೆ. ಟಿ, ಗಂಗಾಧರ ಅವರು ಕರ್ನಾಟಕ ರಾಜ್ಯ ರೈತ ಸಂಘದ ಪದಾಧಿಕಾರಿಯಾಗಿ ಮೊದಲಿನಿಂದಲೂ ರೈತ ಹೋರಾಟಗಳಲ್ಲಿ ಸಕ್ರಿಯವಾಗಿದ್ದವರು. ಒಂದು ನಿರ್ದಿಷ್ಟ, ಸೀಮಿತ ಉದ್ದೇಶದಿಂದ ಪ್ರಾರಂಭವಾದ ೧೯೫೧ ರ ಕಾಗೋಡು ಸತ್ಯಾಗ್ರಹದಿಂದ ಮೊದಲುಗೊಂಡು ಸದ್ಯ ರಾಜಕೀಯ ಪಕ್ಷವಾಗಿ ರೂಪುಗೊಂಡ ಕ. ರಾ. ರೈತಸಂಘದ ವರೆಗೆ ರೈತ ಚಳುವಳಿ ಹಾಯ್ದು ಬಂದ ಮಜಲುಗಳನ್ನು ವ್ಯವಸ್ಥಿತವಾಗಿ ಗುರುತಿಸಿದ ಗಂಗಾಧರ ಅವರು ಮಾತಿನುದ್ದಕ್ಕೂ ನೋವಿನಿಂದ ಕೇಳಿದ ಪ್ರಶ್ನೆಗಳು: ದೇಶದ ಅನ್ನದಾತನೆಂದೂ, ನೇಗಿಲ ಯೋಗಿಯೆಂದೂ ಹೊಗಳಿಸಿಕೊಳ್ಳುವ ನಮ್ಮ ರೈತ ದೇಶಕ್ಕಾಗಿ ಸಾಕು ಸಾಕೆನ್ನುವಷ್ಟು ಉತ್ಪಾದನೆಯನ್ನು ಮಾಡಿಕೊಟ್ಟರೂ ಅವನೇಕೆ ಇನ್ನೂ ಕಂಗಾಲು ಪರಿಸ್ಥಿತಿಯಲ್ಲಿದ್ದಾನೆ ? ಬಹುಸಂಖ್ಯಾತ ರೈತ ಮಕ್ಕಳೇ ಇಂದು ದೇಶದ ವಿದ್ಯಾವಂತ ವರ್ಗವಾಗಿದ್ದರೂ ಅವರೇಕೆ ರೈತ ಸಮಸ್ಯೆಗಳಿಗೆ ಸ್ಪಂದಿಸಿ, ಸತ್ಯಾನ್ವೇಷಣೆಗೆ ಮುಂದಾಗುತ್ತಿಲ್ಲ ?

ಸಮಸ್ಯೆಯ ಮೂಲಕ್ಕೇ ಕೈ ಹಾಕಿದ ಗಂಗಾಧರ ಅವರು, ಇಂದು ರೈತ ವ್ಯವಸಾಯ-ಕೈಗಾರಿಕೆಗೆ ಕಚ್ಚಾ ವಸ್ತು ಪೂರೈಸುವ ಮಾಧ್ಯಮ ಮಾತ್ರವಾಗಿ, ತನ್ನ ಉತ್ಪಾದನೆಗೆ ತಾನೇ 'ಗಿರಾಕಿ'ಯಾಗಿರುವ ವೈರುಧ್ಯವನ್ನು ವಿವರಿಸುತ್ತ, ರೈತರು ಸಂಘಟಿತರಾಗಿ ಚಳುವಳಿಯ ದಾರಿ ಹಿಡಿಯುವುದು ಅನಿವಾರ್ಯವಾಗಿತ್ತೆಂದೂ, ೨೧ ಜುಲೈ ೧೯೮೦ ರ ನರಗುಂದದ ಘಟನೆಯ ನಂತರ ರೈತ ಸಂಘ ಬೃಹತ್ ಚಳುವಳಿಯ ಸ್ವರೂಪ ತಾಳಿ, ೧೯೮೩ ರಲ್ಲಿ ರಾಜಕೀಯ ಪಲ್ಲಟವನ್ನೇ ಉಂಟು ಮಾಡಿದ್ದನ್ನೂ ನೆನೆದರು. ತಮ್ಮದು ಅನ್ಯಾಯದ ವಿರುದ್ಧ 'ಅಹಿಂಸಾತ್ಮಕ ಚಳುವಳಿ' ಯಾಗಿದ್ದರೂ, ಅದನ್ನು 'ಬಂಡಾಯ'ವೆಂದು ಹೆಸರಿಸಿ ಈ ವರೆಗೆ ೧೪೬ ರೈತರ ಬಲಿ ತೆಗೆದುಕೊಂಡದ್ದನ್ನು ಉಲ್ಲೇಖಿಸಿದ ಅವರು ಪ್ರಸ್ತುತ ಸಂದರ್ಭದಲ್ಲಿ ಗ್ಯಾಟ್ ಒಪ್ಪಂದ-ಡಂಕೆಲ್ ಪ್ರಸ್ತಾವನೆಗಳ ಮೂಲಕ, ಅಂತಾರಾಷ್ಟ್ರೀಯ ಪಾತಳಿಯಲ್ಲಿ ನಮ್ಮ ಇಡೀ ಬದುಕಿನ ವ್ಯವಸ್ಥೆಯನ್ನೇ ನಿಯಂತ್ರಣಕ್ಕೆ ತೆಗೆದುಕೊಳ್ಳುತ್ತಿರುವ ಬಹುರಾಷ್ಟ್ರೀಯ ಕಂಪನಿಗಳ ಕುಟಿಲ ಕಾರಸ್ಥಾನದ ವಿರುದ್ಧ ನಾವು 'ಸಮಗ್ರವಾಗಿ' ಚಳುವಳಿ ಮಾಡಬೇಕೆಂದು ಹೇಳಿದರು, "ರೈತ ಸಾಲಗಾರನಲ್ಲ; ಸರಕಾರವೇ ಬಾಕಿದಾರ" ಎಂದು ರೈತ ಸಂಘ ಹೇಳುತ್ತಿರುವ ಮಾತಿನ ಸತ್ಯವನ್ನು ನಮ್ಮ ಬುದ್ಧಿಜೀವಿ ವರ್ಗ

ಎಂದು ಒತ್ತಿಹೇಳಿ ನಮ್ಮ ನೆಲದ ನೈಜ ಉಪಸಂಸ್ಕೃತಿಗಳನ್ನೇ ಸಮೂಲ ನಾಶ ಪಡಿಸುವ ಇಂಥ ಪ್ರಯತ್ನದ ವಿರುದ್ಧ ಸಮಗ್ರ ಚಳುವಳಿ ಈಗ ಅನಿವಾರ್ಯ ಎಂದು ಹೇಳಿದರು.

ಸಮಕಾಲೀನ ಸಂದರ್ಭದಲ್ಲಿ ಕರ್ನಾಟಕ ಕಂಡ ಮತ್ತೊಂದು ದೊಡ್ಡ ಚಳುವಳಿ ಎಂದರೆ 'ಗೋಕಾಕ ಚಳುವಳಿ' ಎಂದೇ ಪ್ರಸಿದ್ಧವಾದ ೧೯೮೨-೮೩ರ ಕನ್ನಡ ಚಳುವಳಿ. ಈ ಭಾಷಾ ಚಳುವಳಿಯ ಬೇರೆ ಬೇರೆ ಹಂತಗಳನ್ನು ಗುರುತಿಸಿದವರು ಪತ್ರಕರ್ತ ಗುಡಿಹಳ್ಳಿ ನಾಗರಾಜ. ಹೈಸ್ಕೂಲಿನ ಭಾಷಾ ಪಠ್ಯ ಕ್ರಮದಲ್ಲಿ ಸಂಸ್ಕೃತದ ಸ್ಥಾನ ಯಾವುದು ? — ಎಂಬ ಬಗ್ಗೆ ಹುಟ್ಟಿದ ವಿವಾದ, ನಂತರದ ದಿನಗಳಲ್ಲಿ ಅನೇಕ ಪ್ರೇರಣೆಗಳಿಂದಾಗಿ ಕರ್ನಾಟಕ ಏಕೀಕರಣ ಚಳುವಳಿಯ ನಂತರದ ಬೃಹತ್ ಆಂದೋಲನವಾಯಿತು. ಕರ್ನಾಟಕದಲ್ಲಿ ಜನಭಾಷೆಯಾದ ಕನ್ನಡಕ್ಕೇ ಅಗ್ರಸ್ಥಾನ ಎಂಬ ಘೋಷಣೆಯೊಂದಿಗೆ ಶುರುವಾದ ಹೋರಾಟಕ್ಕೆ ಜಯ ಸಿಕ್ಕದ್ದು ಇತ್ತೀಚಿನ ಸುಪ್ರೀಂ ಕೋರ್ಟಿನ ತೀರ್ಮಾನದ ನಂತರವೇ. ಈ ನಡುವಿನ ಅವಧಿಯಲ್ಲಿ, ಪ್ರಾರಂಭದಲ್ಲಿ ಚಳುವಳಿಯನ್ನು ಕಟ್ಟಿ ಹಾಕಿದ ಬಂಡಾಯ ಸಾಹಿತ್ಯ ಸಂಘಟನೆ ನಂತರದ ಹಂತದಲ್ಲಿ ಹಿಂದೆ ಸರಿದದ್ದು, ಕೆಲವು ಕಡೆ ಆರ್. ಎಸ್. ಎಸ್ ನಂಥ ಜನವಿರೋಧಿ ಸಂಘಟನೆಗಳು ಚಳುವಳಿಗೆ ಕೋಮುವಾದಿ ಸ್ವರೂಪ ಕೊಟ್ಟದ್ದು, ಸದ್ಯದಲ್ಲಿ ಬೆಂಗಳೂರಿನ ಕನ್ನಡ ಚಳುವಳಿಗಾರರು ಬೆಂಗಳೂರಿನ ಸಮಸ್ಯೆಗಳೇ ಇಡೀ ರಾಜ್ಯದ ಸಮಸ್ಯೆಗಳೇನೋ ಎಂದಂತೆ ವರ್ತಿಸುತ್ತಿರುವುದು—ಇವೇ ಮುಂತಾದ ಅಂಶಗಳನ್ನು ಚರ್ಚಿಸಿದ ನಾಗರಾಜರು, ಕೇಂದ್ರಿಕೃತ ಆರ್ಥಿಕ ನೀತಿಯಿಂದಾಗಿ ಹಿಂದಿಯ ಹೇರಿಕೆ, ಕಾನ್ವೆಂಟ ವ್ಯಾಮೋಹದಿಂದಾಗಿ ಇಂಗ್ಲೀಷಿನ ಆಕ್ರಮಣ, ಭಾಷಾಭಿಮಾನದ ಹೆಸರಿನಲ್ಲಿ ಇತರ ಭಾಷೆಗಳ ಬಗ್ಗೆ ಪ್ರಜಾಸತ್ತಾತ್ಮಕ ನಿಲುವು ತಾಳದಿರುವುದು ಮುಂತಾದ ಗಂಡಾಂತರಗಳನ್ನು ಎತ್ತಿ ತೋರಿಸಿದರು. ಕನ್ನಡ ಚಳುವಳಿ ಎಂಬುದು ಒಟ್ಟು ಸಾಮಾಜಿಕ ಬದಲಾವಣೆಯ ಅಂಗವಾಗಿರಬೇಕೇ ಹೊರತು, ತಾನೇ ಸ್ವಯಂಭೂ ಆಗಲು ಸಾಧ್ಯವಿಲ್ಲ ಎಂಬುದು ಅವರ ಆಶಯ. ಶಿಕ್ಷಣ, ಆಡಳಿತ, ಕಾನೂನುಗಳೆಲ್ಲ ಕನ್ನಡ-ಮಯವಾದಾಗ ಮಾತ್ರ ಕನ್ನಡ ಕಲಿಕೆ ಎಂಬುದು ಅನಿವಾರ್ಯವಾಗುತ್ತದೆ ಎಂಬ ನಾಗರಾಜರ ಅಭಿಪ್ರಾಯ ಎಲ್ಲರೂ ಒಪ್ಪುವಂತಿತ್ತು.

ಬಂಡಾಯ ಸಾಹಿತ್ಯ ಸಂಘಟನೆಯ ಇನ್ನೊಬ್ಬ ರಾಜ್ಯ ಸಂಚಾಲಕ ಆರ್. ವಿ. ಭಂಡಾರಿ ೨ನೇ ಗೋಷ್ಠಿಯ ಅಧ್ಯಕ್ಷರು, ಇಂಡಿಯಾದ ಸಂಕೀರ್ಣ ಸಂದರ್ಭದಲ್ಲಿರುವ ಜಾತಿ, ವರ್ಗ, ಜಾತಿಯಲ್ಲಿ ವರ್ಗ, ವರ್ಗದಲ್ಲಿ ಜಾತಿ ಮುಂತಾದವುಗಳ ವಿಶ್ಲೇಷಣೆ

ಮಾಡಿದ ಭಂಡಾರಿಯವರು, ದಶಕಗಳ ಹಿಂದೆಯೇ ಏಕಾಂಗಿಯಾಗಿ ಪುರೋಹಿತ ಶಾಹಿಯ ವಿರುದ್ಧ, 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂದು ಹೋರಾಡಿದ ಕುವೆಂಪು ಹೆಸರಿನ ವಿಶ್ವವಿದ್ಯಾಲಯ ಇಂಥದೊಂದು ವಿಚಾರ ಸಂಕಿರಣ ಏರ್ಪಡಿಸಿದ್ದು ಅಭಿನಂದನೀಯ ಅಂದರು.

*

ಇಡೀ ವಿಚಾರ ಸಂಕಿರಣದ ಹೆಚ್ಚುಗಾರಿಕೆ ಎಂದರೆ ಪ್ರತಿಯೊಂದು ಪ್ರಬಂಧದ ನಂತರ ನಡೆಯುತ್ತಿದ್ದ ಚರ್ಚೆ, ವಾದ, ವಿವಾದ. ನಾನು ಹೆಸರಿಗೆ ಸಮಾರೋಪ ಭಾಷಣಕಾರನಾಗಿದ್ದರೂ ಇಂಥ ಚರ್ಚೆಯ ಅನೇಕ ಹಂತಗಳಲ್ಲಿ ಪಾಲು ಗೊಳ್ಳಲೇ ಬೇಕಾಗಿತ್ತು. ಕರ್ನಾಟಕದ ರೈತ ಚಳುವಳಿ ಕೇವಲ ದೊಡ್ಡ ರೈತರ ಚಳುವಳಿ ಯಾಗಿದೆಯೇ ? ಕೃಷಿ-ಕಾರ್ಮಿಕರ ಬಗ್ಗೆ ಅಲಕ್ಷ್ಯ ತಾಳಿದೆಯೇ ?–ಎಂಬ ಪ್ರಶ್ನೆ ಗಳನ್ನು ನಾನು ಎತ್ತಿದಾಗ, ಕೆ. ಟಿ. ಗಂಗಾಧರರು ಸಮರ್ಪಕವಾಗಿ ಉತ್ತರಿಸಿದರು. ಆದರೆ ಬದನವಾಳು ಘಟನೆಯ ಸಂದರ್ಭದಲ್ಲಿ ರೈತ ಸಂಘದ ಅಧ್ಯಕ್ಷ ನಂಜುಂಡಸ್ವಾಮಿ ಅವರು, "ದ. ಸಂ. ಸ ವನ್ನು ಬ್ಯಾನ್ ಮಾಡಬೇಕು," ಎಂದು ಹೇಳಿದರೆನ್ನಲಾದ ವರದಿಯ ಬಗ್ಗೆ ಗಂಗಾಧರರು, "ಅವರೊಂದಿಗೆ ಮಾತಾಡಿ ಹೇಳುತ್ತೇನೆ " ಎನ್ನಬೇಕಾಯಿತು.

ಇಂಡಿಯಾದ ಕಮ್ಯುನಿಸ್ಟರು ಇಲ್ಲಿಯ 'ಜಾತಿ'ಯನ್ನು ಬೇಕೆಂತಲೇ ಮರೆತು, ಕೇವಲ 'ವರ್ಗ'ದ ಬಗ್ಗೆ ಮಾತಾಡಿದ್ದರಿಂದ ಅವರು ತಮ್ಮ ದೇಶದಲ್ಲಿಯೇ 'ಪರದೇಶಿ'ಗಳಾಗ ಬೇಕಾಯಿತು ಅಂತ ನಾನಂದಾಗ, ಗೆಳೆಯರೊಬ್ಬರು, "ಸೋಶಲಿಸ್ಟರು ಪರದೇಶಿಗ ಳಾದಷ್ಟು ಕಮ್ಯುನಿಸ್ಟರು ಆಗಿಲ್ಲ " ಅಂದರು. ನಾನು ಮತ್ತೆ ಮುಂದೆ ಹೋಗಿ ಈ ಗೆಳೆಯರಿಗೆ ಮತ್ತಷ್ಟು ಖುಶಿಯಾಗುವಂತೆ ಹೇಳಿದೆ: "ಸೋಶಲಿಸ್ಟರ ಮುಖ್ಯ ಸಿದ್ಧಾಂತ ವಿಕೇಂದ್ರೀಕರಣ, ಡಿಸೆಂಟ್ರಲೈಜೇಶನ್. ಅದಕ್ಕನುಯಗುಣವಾಗಿ ನಮ್ಮ ಮುಖಂಡರು ಎಲ್ಲ ಪಕ್ಷಗಳಲ್ಲಿ ಸೇರಿಕೊಂಡು, ಅಲ್ಲಿಯೇ ಲಿಂಗೈಕ್ಯರಾಗಿ, ಡಿ ಸೆಂಟ್ರಲೈಜ್ ಆಗಿದ್ದಾರೆ ! "

ರೈತ ಸಂಘ ದಲಿತ-ವಿರೋಧಿಯೇ ಎಂಬ ಚರ್ಚೆ ನಡೆದಾಗ ಗಂಗಾಧರ ಅವರು ಇತ್ತೀಚೆಗೆ ನಡೆದ ಮಂಡಲ ಪಂಚಾಯ್ತಿ ಚುನಾವಣೆಯಲ್ಲಿ ತಮ್ಮ ಕ್ಷೇತ್ರದಲ್ಲಿ ದಲಿತ ಮಹಿಳೆಯನ್ನು ಅಧ್ಯಕ್ಷೆಯನ್ನಾಗಿ ಮಾಡಿದ ದೃಷ್ಟಾಂತ ಕೊಟ್ಟರು. ಆ ಮಹಿಳೆ ಯಿಂದಲೇ ಊರ ದೇವಸ್ಥಾನದಲ್ಲಿ ಪೂಜೆ ಮಾಡಿಸುವ ಸಂಕಲ್ಪದ ಬಗ್ಗೆ ಅವರು ಮಾತಾಡಿದಾಗ, ನನಗೆ ಯಾಕೋ ಅನಂತಮೂರ್ತಿಯವರ ಭಾರತೀಪುರದ ಜಗನ್ನಾಥನ 'ಕ್ರಾಂತಿ'ಯ ನೆನಪಾಗಿ, 'ಇದೂ ಕೂಡ ಯಥಾಸ್ಥಿತಿಯ ಮುಂದು ವರಿಕೆಯೇ ಅಲ್ಲವೆ !' ಅಂತ ಕೇಳಿದೆ.

ನನ್ನನ್ನು ಬಹಳವಾಗಿ ಕಾಡುತ್ತಿರುವ ಪ್ರಶ್ನೆ ನಮ್ಮ 'ಉಪಸಂಸ್ಕೃತಿ'ಗಳದು. ನಮ್ಮ ಉಪಸಂಸ್ಕೃತಿಗಳು ಬಹುತೇಕವಾಗಿ ವೈದಿಕ ಶಾಹಿಯ 'ಯಜಮಾನ' ಸಂಸ್ಕೃತಿಯ ಅನೇಕ ಮೌಲ್ಯಗಳನ್ನು ಅನುಕರಣ ಮಾಡುತ್ತಿರುವಾಗ ಇವುಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸುವುದು ಸಮಂಜಸವೇ ? ಹಂಸಕ್ಷೀರ ನ್ಯಾಯ ಮಾಡಬೇಕೆಂದರೆ ಇದು ಹಾಲು, ಇದು ನೀರು ಅಂತ ಪರೀಕ್ಷೆ ಮಾಡುವುದು ಹೇಗೆ ? -- ಇದು ಇನ್ನೂ ಗಂಭೀರವಾಗಿ ಚರ್ಚಿಸಬೇಕಾದ ವಿಷಯ. ಹಾಗೆಯೇ ನಮ್ಮ ಹಬ್ಬ, ಹುಣ್ಣಿಮೆಗಳನ್ನು 'ಸಾಂಸ್ಕೃತಿಕ ಹಸಿವು' ನೀಗಿಸಲು ಉಪಯೋಗಿಸಬೇಕು ಎಂಬ ಸಿದ್ದನಗೌಡ ಪಾಟೀಲರ ಸೂಚನೆಯನ್ನು ಕೂಡ ಚರ್ಚೆಗೆ ಒಳಪಡಿಸಬೇಕಾಗಿದೆ.

*

ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದವರು ಚಿತ್ರದುರ್ಗದ ಮುರುಘ ರಾಜೇಂದ್ರ ಬೃಹನ್ಮಠದ ಜಗದ್ಗುರುಗಳಾದ ಶ್ರೀ ಶಿವಮೂರ್ತಿ ಮಹಾಸ್ವಾಮಿಗಳು. ಪುರೋಹಿತಶಾಹಿ ಸಂಕೇತಗಳಾದ ಇಂಥ ಸ್ವಾಮಿಗಳೆಂದರೇ ಅಲರ್ಜಿ ನನಗೆ. ಸ್ವಾಮಿಗಳಿಗೂ ಕೂಡ ಒಂದು ಬಗೆಯ ಮುಜಗರವಾಗಿತ್ತು. ಆದರೆ ಹೊಸ ತಲೆ ಮಾರಿನ ಇಂಥ ಅನೇಕ ವೀರಶೈವ ಸ್ವಾಮಿಗಳು ಸಮಕಾಲೀನ ಸತ್ಯಗಳಿಗೆ ಸ್ಪಂದಿಸುತ್ತ ೧೨ನೆಯ ಶತಮಾನದ ಮೂಲ ಸಾಂಸ್ಕೃತಿಕ ಆಯಾಮಗಳನ್ನು ತಮ್ಮ ನಡೆ, ನುಡಿಗಳಿಗೆ ಹೊಂದಿಸಿಕೊಳ್ಳುತ್ತಿರುವುದೂ ನಡೆದಿದೆ. ಶಿವಮೂರ್ತಿ ಸ್ವಾಮಿಗಳು ಸ್ಥಾವರ ವಿರೋಧಿಗಳಾದ ಬುದ್ಧ, ಬಸವಣ್ಣನವರಿಗಾದ ದುರಂತವನ್ನು ನೆನೆಯುತ್ತ, ಪವಾಡ ಗಳಲ್ಲಿ ಬಂದಿಯಾಗಿರುವ ವಿಶ್ವಗುರು ಬಸವಣ್ಣನನ್ನು ಮೊದಲು 'ಲಿಂಗಾಯತ'ರಿಂದ ಬಿಡುಗಡೆ ಮಾಡಬೇಕಾಗಿದೆ ಎಂದಾಗ ಆ ಮಾತು ಲಿಂಗ ಮೆಚ್ಚಿ ಅಹುದಹುದೆನ್ನು ವಂತಿತ್ತು.

*

ಶಿವಮೂರ್ತಿ ಸ್ವಾಮಿಗಳು ಗ್ರಾಮಾಂತರ ಪ್ರದೇಶದಲ್ಲಿ ಪಾದಯಾತ್ರೆಯ ಮೂಲಕ ಮಾಧ್ಯಪಾನ ನಿಷೇಧ ಕಾರ್ಯಕ್ರಮ ಮಾಡುತ್ತಿದ್ದ ವಿಷಯ ಪ್ರಸ್ತಾಪಿಸಿ ನಾನು ನನ್ನ ಭಾಷಣದಲ್ಲಿ "ಸ್ವಾಮಿಜೀಯವರು ಬಡವರಿಗೆ ಸೆರೆ ಕುಡಿಯಬೇಡಿರೆಂದು ಹೇಳು ತ್ತಾರೆ ; ಆದರೆ ಇಡೀ ಸರಕಾರವನ್ನೇ ನಿಯಂತ್ರಿಸುತ್ತಿರುವ ಲಿಕರ್ ಲಾಬಿ ಶ್ರೀಮಂತ ಶಿಷ್ಯರಿಗೇಕೆ ಹೇಳುವುದಿಲ್ಲ ?" ಅಂತ ಚುಚ್ಚಿದ್ದೆ. ಸ್ವಾಮಿಗಳು ಒಂದು ಪ್ರಸಂಗ ಉಲ್ಲೇ ಖಿಸಿದರು. "ಇಂಥ ಒಬ್ಬ ಮಹಾಶಯನಿಗೆ ಹೇಳಿ ನೋಡಿದೆವು. ಅವನು ಲಿಕರ್ ಬಿಜಿನೆಸ್ಸಿನಲ್ಲಿ ೫೦ ಲಕ್ಷ ರೂ. ತೊಡಗಿಸಿದ್ದಾನಂತೆ. 'ಅಷ್ಟು ಹಣ ನೀವು ಕೊಡುತ್ತೀ ರೇನು ?' ಅಂತ ಅವನು ನಮ್ಮ ಮೇಲೆಯೇ ತಿರುಗಿ ಬಿದ್ದರೆ ಏನು ಮಾಡಬೇಕು ?"

*

ನಮ್ಮ ಎಲ್ಲ ಚಳುವಳಿಗಳ 'ಇತಿ' ಮತ್ತು 'ಮಿತಿ' ಇದೇ ಇರಬಹುದೇ ? ●

# ಸ್ವಾತಂತ್ರ್ಯ ಚಳುವಳಿ ಸಂದರ್ಭ ಮತ್ತು ಆಧುನಿಕ ಕನ್ನಡ ಸಾಹಿತ್ಯ

ಎಂ. ಎಂ. ಕಲಬುರ್ಗಿ

ಆಂಗ್ಲರ ವಿರುದ್ಧ ಭಾರತೀಯರು ಕೈಕೊಂಡ ಸ್ವಾತಂತ್ರ್ಯ ಹೋರಾಟದಲ್ಲಿ ಸಂಸ್ಥಾನಿಕರ ಯುದ್ಧ ಮತ್ತು ದೇಶಭಕ್ತರ ಚಳುವಳಿ ಎಂಬ ಎರಡು ಘಟ್ಟಗಳು ಕಂಡು ಬರುತ್ತವೆ. ಸೈನ್ಯ ಕಟ್ಟಿಕೊಂಡು ಹೋರಾಡಿದರೂ ಸಂಸ್ಥಾನಿಕರಿಂದ ಸಾಧ್ಯವಾಗದುದನ್ನು, ಗಾಂಧೀಜಿ ದೇಶಭಕ್ತರನ್ನು ಕಟ್ಟಿಕೊಂಡು ಸಾಧ್ಯಮಾಡಿ ತೋರಿಸಿದರು. ಅಸಂಘಟಿತ ಅಹಿಂಸೆ ದೊಡ್ಡದೆಂಬುದನ್ನು ಆಚರಿಸಿ ತೋರಿಸಿದರು.

ಭಾರತೀಯರದು ವ್ಯಕ್ತಿವಾದಿ ಸಂಸ್ಕೃತಿಯೇ ಹೊರತು ಸಮೂಹವಾದಿ ಸಂಸ್ಕೃತಿಯಲ್ಲ. ಆದುದರಿಂದ ಈ ದೇಶದ ಇತಿಹಾಸದಲ್ಲಿ ವ್ಯಕ್ತಿಕಲ್ಯಾಣ ಸಿದ್ಧಾಂತ ಬೆಳೆಯಿತೇ ಹೊರತು, ಸಮೂಹಕಲ್ಯಾಣ ಸಿದ್ಧಾಂತ ಆಕಾರ ಪಡೆಯಲಿಲ್ಲ. ಹೆಚ್ಚಿನದಾಗಿ ನಮ್ಮಲ್ಲಿ ವರ್ಣವ್ಯವಸ್ಥೆ ಜಾತಿವ್ಯವಸ್ಥೆಯಾಗಿ ಬಿಚ್ಚಿಕೊಂಡು, ಜನಸಮೂಹದಲ್ಲಿ ಬಿರುಕುಗಳು ಬೆಳೆದ ಕಾರಣ, ಸಂಘಟಿತ ಸಮಾಜ ರೂಪಗೊಳ್ಳಲೇ ಇಲ್ಲ. ಇದರಿಂದಾಗಿ "ಭಾರತೀಯರು ವೈಯಕ್ತಿಕವಾಗಿ ಸಬಲರು, ಸಾಮಾಜಿಕವಾಗಿ ದುರ್ಬಲರು" ಎನಿಸಿದರು, ಗಾಂಧೀಜಿ ಗೆದ್ದುದು "ವೈಯಕ್ತಿಕವಾಗಿ ಸಬಲರು" ಎಂಬುದಕ್ಕೆ ಉದಾಹರಣೆಯಾದರೆ, ಸಂಸ್ಥಾನಿಕರು ಸೋತುದು "ಸಾಮಾಜಿಕವಾಗಿ ದುರ್ಬಲರು" ಎಂಬುದಕ್ಕೆ ಉದಾಹರಣೆಯಾಗಿದೆ.

ಚಳುವಳಿ ಎನ್ನುವುದು ಸಂಘಟಿತ ಸಮಾಜವನ್ನು ಬಯಸುತ್ತದೆ. ಪಾಶ್ಚಾತ್ಯರಲ್ಲಿ ಸಮಾಜಕ್ಕೆ ಸಂಘಟನೆಯು ತಳಹದಿಯಿರುವುದರಿಂದ ಅಲ್ಲಿ ಚಳುವಳಿ ಹುಟ್ಟುವುದು ಸಹಜ, ಗೆದೆಯುವುದೂ ಸಹಜ. ಇದಕ್ಕೆ ವಿರುದ್ಧವೆನ್ನುವಂತೆ ಅಸಂಘಟಿತ

ಸಮಾಜದ ಭಾರತದಲ್ಲಿ ಚಳುವಳಿ ಹುಟ್ಟುವುದೂ ಕಷ್ಟ, ಹುಟ್ಟಿದರೂ ಒಂದು ಘಟ್ಟದಲ್ಲಿ ಒಡೆದುಹೋಗುವುದೇ ಹೆಚ್ಚು. ಯಾವುದೇ "ರಾಷ್ಟ್ರೀಯ ಚಳುವಳಿ"ಗೆ ಇಳಿದ ಭಾರತೀಯರು ಮಂದಿರ—ಮಸೀದೆ ಪ್ರಶ್ನೆ ಬಂದಾಗ ಹಿಂದೂ—ಮುಸಲ್ಮಾನ ರೆಂದು ಒಡೆದುಹೋಗುತ್ತಾರೆ. "ಭಾಷಾ ಚಳುವಳಿ"ಗೆ ಇಳಿದ ಕನ್ನಡಿಗರು, ಸಂಸ್ಕೃತ—ಕನ್ನಡದ ಪ್ರಶ್ನೆ ಬಂದಾಗ ಬ್ರಾಹ್ಮಣ—ಬ್ರಾಹ್ಮಣೇತರರೆಂದು ಒಡೆದು ಹೋಗುತ್ತಾರೆ. "ಧಾರ್ಮಿಕ ಚಳುವಳಿಗೆ"ಗೆ ಇಳಿದ ಬ್ರಾಹ್ಮಣರು, ಒಳಪಂಗಡದ ಪ್ರಶ್ನೆ ಬಂದಾಗ ದ್ವೈತ—ಅದ್ವೈತ—ವಿಶಿಷ್ಟಾದ್ವೈತರೆಂದು ಒಡೆದುಹೋಗುತ್ತಾರೆ. ಹೀಗೆ ಸಮಾಜ ಒಡೆದುಹೋಗುವುದಕ್ಕೆ ಬೇಕಾಗುವ ಸಿದ್ಧಕಾರಣಗಳು ನಮ್ಮಲ್ಲಿ ಮೊದಲಿನಿಂದಲೂ ಬೇಕಾದಷ್ಟಿವೆ. ಈ ರೀತಿ ಒಮ್ಮೆ ಕುದಿಯುವಷ್ಟರಲ್ಲಿಯೇ ಎರಡು ಸಲ ಹಳಸುವ ನಮ್ಮ ಸಮಾಜದಲ್ಲಿ ರಾಜಸತ್ತಾವಮೌಲ್ಯದ ಯುದ್ಧ ನಡೆಯಬಹುದೇ ಹೊರತು, ಪ್ರಜಾಪ್ರಭುತ್ವಮೌಲ್ಯದ ಚಳುವಳಿ ನಡೆಯುವುದು ಕಷ್ಟ. ಇಂಥ ವಿಪರೀತ ಪರಿಸರದಲ್ಲಿಯೂ ಗಾಂಧೀಜಿ ಭಾರತೀಯರ ಸಂಘಟನೆ ಮತ್ತು ಆಂಗ್ಲರೊಡನೆ ಸಂಗ್ರಾಮ—ಎಂಬ ಎರಡು ಹೊಣೆಗಳನ್ನು ಪೂರೈಸಿದರು. ತಮ್ಮ ಸಂಘಟನೆ ಒಡೆದುಹೋಗದಂತೆ ಮತ್ತು ಸಂಗ್ರಾಮ ಅಹಿಂಸಾನಿಷ್ಠವಾಗುವಂತೆ ಎಚ್ಚರ ವಹಿಸಿದರು.

ಗಾಂಧೀ ಮಹಾತ್ಮನ ಈ ಭಾರತ ಸ್ವಾತಂತ್ರ್ಯಯುದ್ಧ ಕೃಷ್ಣಪರಮಾತ್ಮನ ಮಹಾ ಭಾರತ ಯುದ್ಧದಷ್ಟೇ ದೊಡ್ಡದು. ಅದರ ಮಾಧ್ಯಮ ಹಿಂಸೆ, ಇದರ ಮಾಧ್ಯಮ ಅಹಿಂಸೆ. ಬಹುಶಃ ಆ ಹಿಂಸಾಯುದ್ಧಕ್ಕಿಂತ ದೊಡ್ಡ ಯುದ್ಧಗಳು ಜಗತ್ತಿನ ಬೇರೆಡೆ ಗಳಲ್ಲಿ ಜರುಗಿರಬಹುದು; ಆದರೆ ಈ ಅಹಿಂಸಾಯುದ್ಧ ಜಗತ್ತಿನಲ್ಲಿಯೇ ಪ್ರಥಮ ಪ್ರಯೋಗವೆನಿಸಿದೆ. ಹೀಗಿದ್ದೂ ಆ ಯುದ್ಧವನ್ನು ವ್ಯಾಸರು ಸಾಹಿತ್ಯವಾಗಿಸಿದಂತೆ, ಈ ಯುದ್ಧವನ್ನು ಸಾಹಿತ್ಯವಾಗಿಸುವ ಇನ್ನೊಬ್ಬ ವ್ಯಾಸ ಇನ್ನೂ ಹುಟ್ಟಿಬಂದಿಲ್ಲ ವೆಂದೇ ಹೇಳಬೇಕು.

ಸಾಹಿತ್ಯ ಬೇರೆ, ಇತಿಹಾಸ ಬೇರೆ. ಜೀವನದ ಗತಿಯನ್ನು ಭಾಷೆಯಲ್ಲಿ ಕಲಾತ್ಮಕವಾಗಿ ಹೇಳುವುದು ಸಾಹಿತ್ಯ, ದಾಖಲಾತ್ಮಕವಾಗಿ ಹೇಳುವುದು ಇತಿಹಾಸ. ಭಾರತ ಸ್ವಾತಂತ್ರ್ಯಚಳುವಳಿಯು ಇತಿಹಾಸ ರೂಪದಲ್ಲಿ ಆಗಾಗ ದಾಖಲಾಗುತ್ತ ಬಂದಿದೆ. ಆದರೆ ಅದು ಸಾಹಿತ್ಯರೂಪದಲ್ಲಿ ದಾಖಲಾದುದು ಎಷ್ಟು ? ಅದರ ಸ್ವರೂಪವೇನು ? ಎಂಬುದು ಇಲ್ಲಿಯ ಮುಖ್ಯ ಪ್ರಶ್ನೆಯಾಗಿದೆ.

ವೈಯುಕ್ತಿಕವೇ ಇರಲಿ, ಸಾಮಾಜಿಕವೇ ಇರಲಿ, ಘಟನೆಯನ್ನು ಸಾಧಾರಣೀಕರಿಸಿ ಬರೆಯುವುದು ಸಾಹಿತ್ಯದ ಮುಖ್ಯ ಲಕ್ಷಣವಾಗಿದೆ. ಇದರಿಂದಾಗಿ ಒಂದು ಬಗೆಯ

ಸುರಕ್ಷಿತ ನೆಲೆಯಲ್ಲಿ ನಿಂತು ಬರವಣಿಗೆಯನ್ನು ಪೂರೈಸುವ ಅನುಕೂಲತೆ ಸಾಹಿತಿಗಿರುತ್ತದೆ. ಆದರೆ ಚಳುವಳಿ ಸಂದರ್ಭದಲ್ಲಿ ಸಾಧಾರಣೀಕರಣವನ್ನೂ ಮೀರಿ ನಿರ್ದಿಷ್ಟ ರೀತಿಯಿಂದ, ಸುರಕ್ಷಿತ ನೆಲೆಯ ಹಂಗನ್ನೂ ಹರಿದುಕೊಂಡು ನಿರ್ಭೀತ ನಿಲುವಿನಿಂದ ಬರೆದ ವಿಶಿಷ್ಟಸಾಹಿತ್ಯ ಹುಟ್ಟಬೇಕಾಗುತ್ತದೆ. "ಓಲೈಸಿ ಬಾಳ್ವುದೇ ಕಷ್ಟಮಿಳಾಧಿನಾಥರಂ" ಎಂಬ ಪಂಪನ ಮಾತು ಸಾಧಾರಣೀಕರಣ ಸಾಹಿತ್ಯವಾದರೆ, "ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸುವೆನೆಂದು ನುಡಿವರಯ್ಯಾ ಪ್ರಮಥರು ಕೊಡುವೆನುತ್ತರನವರಿಗೆ" ಎನ್ನುವ ಬಸವಣ್ಣನ ಮಾತು ಸಾಧಾರಣೀಕರಣಕ್ಕೆ ಭಿನ್ನವಾದ ಸಾಹಿತ್ಯವರ್ಗಕ್ಕೆ ಸೇರುತ್ತದೆ. "ಪೆರರೀವುದೆಂ ಪೆರರ ಮಾಡುವುದೇಂ ಪೆರರಿಂದಮಪ್ಪುದೇಂ" ಎಂಬ ಪಂಪನ ಮಾತು ಸುರಕ್ಷಿತ ನೆಲೆಯ ಬರವಣಿಗೆಯಾದರೆ, "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಒರೆಯಾವಿನ ಬೆನ್ನ ಹರಿಯಲೇಕಯ್ಯ ?......ಬಿಜ್ಜಳನ ಭಂಡಾರ ನನಗೇಕಯ್ಯಾ" ಎಂಬುದು ಸುರಕ್ಷಿತ ನೆಲೆಯನ್ನು ದಾಟಿದ ಬರವಣಿಗೆಯೆನಿಸುತ್ತದೆ. ಈ ಇಬ್ಬರ ಆಶಯ ಒಂದೇ ಆಗಿದ್ದರೂ ಪಂಪನದು ಸಾಧಾರಣೀಕೃತ ಅಭಿವ್ಯಕ್ತಿ, ಬಸವಣ್ಣನದು ಚಳುವಳಿಯ ಅಭಿವ್ಯಕ್ತಿ. ಪಂಪನಿಗೆ ಹೇಳಲು ಸಾಧ್ಯವಾಗದುದು ಬಸವಣ್ಣನಿಗೆ ಹೇಳಲು ಏಕೆ ಸಾಧ್ಯವಾಯಿತೆಂದರೆ, ಪಂಪ ವ್ಯವಸ್ಥೆಯ ಭಾಗವಾಗಿರುವ ಕವಿ. ಬಸವಣ್ಣ ವ್ಯವಸ್ಥೆಯ ಭಾಗವಾಗಿದ್ದರೂ ಅದರ ಪರವಾಗಿರದ ಕವಿ. ನಮ್ಮ ನವೋದಯ ಸಾಹಿತಿಗಳು ಕವಿ ಪಂಪನಂತೆ ಕಾಣುತ್ತಾರೆಯೇ ಹೊರತು, ಚಳುವಳಿಕಾರ ಬಸವಣ್ಣನಂತೆ ಕಾಣುವುದಿಲ್ಲ. ಇದಕ್ಕೆ ಕಾರಣಗಳು ಹೀಗಿವೆ:

ನಮ್ಮ ಸಾಹಿತ್ಯಪ್ರಕಾರಗಳಲ್ಲಿ ವಚನ, ಪ್ರಗತಿಶೀಲ, ದಲಿತ — ಬಂಡಾಯಗಳು ಚಳುವಳಿ ಎನಿಸಿಕೊಂಡರೆ, ಮಿಕ್ಕ ಚಂಪೂ, ಷಟ್ಪದಿ, ರಮ್ಯ, ನವ್ಯಗಳು ಪ್ರಯೋಗಗಳೆನಿಸಿಕೊಳ್ಳುತ್ತವೆ. ಅವು ಚಳುವಳಿಯೆನಿಸಿಕೊಳ್ಳಲು ಕಾರಣ ವಚನ ಘಟ್ಟದಲ್ಲಿ ತೊಡಗಿಕೊಂಡವರು ಮಾದರ ಚೆನ್ನಯ್ಯ, ಮಡಿವಾಳ ಮಾಚಯ್ಯನಂಥ ಸಾಮಾನ್ಯರು. ಪ್ರಗತಿಶೀಲ ಘಟ್ಟದಲ್ಲಿ ತೊಡಗಿಕೊಂಡವರು ನಿರಂಜನ, ಕಟ್ಟೀಮನಿ, ಅ. ನ. ಕೃ., ತ. ರಾ. ಸು. ಅವರಂಥ ಸಾಮಾಜಿಕರು. ದಲಿತ—ಬಂಡಾಯದಲ್ಲಿ ದುಡಿಯುವ ಬಹುಸಂಖ್ಯಾತ ಬರಹಗಾರರು ಕೆಳವರ್ಗದ ನೆಲೆಯಿಂದ ಬಂದವರು. ಇಂಥವರದು ಸಹಜವಾಗಿಯೇ ಜನಪರ ಸಾಮಾಜಿಕ ದೃಷ್ಟಿ. ಮಿಕ್ಕ ಚಂಪೂ–ಷಟ್ಪದಿಯ ಪಂಪ–ಚಾಮರಸಾದಿಗಳಾಗಲಿ, ನವೋದಯದ ಕನ್ನಡ ಪ್ರಾಧ್ಯಾಪಕರಾಗಲಿ, ನವ್ಯದ ಇಂಗ್ಲೀಷ ಪ್ರಾಧ್ಯಾಪಕರಾಗಲಿ ಮೇಲುವರ್ಗದಿಂದ ಬಂದವರು. ಇವರದು ಸಹಜವಾಗಿಯೇ ಯಜಮಾನಪರ ಸಾಮಾಜಿಕ ದೃಷ್ಟಿ. ಸಾಹಿತ್ಯದಲ್ಲಿ ಸಾಮಾಜಿಕರು ತೊಡಗಿಕೊಂಡಾಗಲೇ, ಸಾಮಾಜಿಕ ನಿಲುವು ತಾಳಿದಾಗಲೇ ಅದು

ಚಳುವಳಿಯು ಸ್ವರೂಪ ಪಡೆಯುವುದೆಂದು ಇದರಿಂದ ಸ್ಪಷ್ಟವಾಗುತ್ತದೆ. ಹೀಗಾಗಿ ನವೋದಯ ಯುಗದ ಸಾಹಿತ್ಯದಲ್ಲಿ ಚಳುವಳಿಯ ಹೆಜ್ಜೆಗಳು ಕಾಣದಿರುವುದು ಸ್ವಾಭಾವಿಕ.

ಎರಡನೆಯದಾಗಿ, ಸ್ವಾತಂತ್ರ್ಯ ಚಳುವಳಿ ಕಾಲದ ಸಾಹಿತ್ಯವನ್ನು "ರಮ್ಯವಾದಿ" ಯೆಂದು ಗುರುತಿಸಲಾಗುತ್ತದೆ. ದೇಶಕ್ಕೆ ಚಳುವಳಿಯು ಬೆಂಕಿ ಆವರಿಸಿರುವಾಗ ಈ ಕವಿಗಳು ರಮ್ಯಸಾಹಿತ್ಯ ನಿರ್ಮಾಣಕ್ಕೆ ತೊಡಗಿರುವುದು ಎಷ್ಟರ ಮಟ್ಟಿಗೆ ಸಮಂಜಸ ? ಇವರು ಹೀಗೇಕಾದರು ? ಎನ್ನುವುದು ಇಲ್ಲಿಯ ಮುಖ್ಯ ಪ್ರಶ್ನೆ. ಇದಕ್ಕೆ ಉತ್ತರವೆಂದರೆ ಮೇಲೆ ಹೇಳಿದಂತೆ ಈ ಕಾಲದ ಸಾಹಿತಿಗಳೆಲ್ಲ ಮೇಲು ವರ್ಗಕ್ಕೆ ಸಂಬಂಧಿಸಿದವರು, ಮೇಲಾಗಿ ಸರಕಾರೀ ನೌಕರಿಯಲ್ಲಿದ್ದವರು. ಇಂಥ ವರದು ಡಿಫೆನ್ಸಿವ್ ಪರ್ಸನಾಲಿಟಿ. ಸಮಾಜ, ಸರಕಾರಗಳ ಗೊಡವೆಗೆ ಹೋಗದೆ, ಹೋದರೂ ಸಾಧಾರಣೀಕರಣಗೊಳಿಸಿ ಬರೆದು ಜಾರಿಕೊಳ್ಳುವುದು ಇವರ ಸ್ವಭಾವ. ಇಂಥವರಿಂದ ಒಂದು ಬಗೆಯ ಸಂರಕ್ಷಣಾತ್ಮಕ ನೆಲೆಯ ಸಾಹಿತ್ಯ ಹುಟ್ಟಿಕೊಳ್ಳುವುದು ಸಹಜ. ಇದಲ್ಲದೆ, ಹೊಸ ಸಾಹಿತ್ಯ ನಿರ್ಮಾಣದ ತೀವ್ರ ಆಸಕ್ತಿ ಹೊಂದಿದ ಇವರನ್ನು ಅಂದು ಆಂಗ್ಲ ಭಾಷೆಯಲ್ಲಿ ಬೆಳೆದುನಿಂತಿದ್ದ "ರಮ್ಯ" ಸಾಹಿತ್ಯ ಆಕರ್ಷಿಸಿತೆಂದು ಕಾಣುತ್ತದೆ. ಹೀಗಾಗಿ, ಈ ಅವಧಿಯ ಸಾಹಿತ್ಯವನ್ನು ಓದಿದರೆ ಒಂದು ದೊಡ್ಡ ಚಳುವಳಿ ಕಾಲಘಟ್ಟದಲ್ಲಿ ಹುಟ್ಟಿದ ಸಾಹಿತ್ಯವೆಂಬಂತೆ ಅದು ನಮ್ಮ ಕಣ್ಣಿಗೆ ಅಪ್ಪಳಿಸುವುದಿಲ್ಲ. ಅನ್ಯ ದಾಖಲೆಗಳು ಕಳೆದುಹೋದರೂ ಸಾಹಿತ್ಯವೆನ್ನುವುದು ತನ್ನ ಕಾಲದ ತಾಜಾ ಸತ್ಯಗಳನ್ನು ತೆರೆದು ತೋರಿಸಬೇಕು. ನನಗಂತೂ ಈ ಯುಗದ ಸಾಹಿತ್ಯ ಚಳುವಳಿಯ ಚಕಾರವನ್ನೂ ತಿಳಿಸಿಕೊಡುವುದಿಲ್ಲವೆನಿಸುತ್ತದೆ. ಈ ಬರಹಗಾರರಿಗೆ ಚಳುವಳಿಯ ಬಗ್ಗೆ ಒಲವು ಇದ್ದರೂ ರಕ್ಷಣಾತ್ಮಕ ಜೀವನ ಧೋರಣೆ ಇವರಿಂದ ಚಳುವಳಿ ಸಾಹಿತ್ಯವನ್ನು ಬರೆಯಗೊಡಲಿಲ್ಲ. ರಮ್ಯ ಯುಗದ ಪ್ರವರ್ತಕರಾದ ಬಿ. ಎಂ. ಶ್ರೀ. ಅವರೇ ಅರಮನೆಯಿಂದ ಪಡೆದ 'ರಾಜಸೇವಾಸಕ್ತ' ಬಿರುದನ್ನು ಎದೆಯ ಮೇಲೆ ಹಾಕಿಕೊಂಡಾಗ, ಈ ಪರಂಪರೆಯ ಸಾಹಿತಿಗಳು ಸಂಸ್ಥಾನಿಕರನ್ನಾಗಲಿ, ಆಂಗ್ಲ ವಸಾಹತುಶಾಹಿಗಳನ್ನಾಗಲಿ, ಎದುರಿಸಿ ಬರೆಯುವುದು ಹೇಗೆ ಸಾಧ್ಯ ? ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಎಚ್. ವ್ಹಿ. ನಂಜುಡಯ್ಯ, ಸರ್ ಪುಟ್ಟಣ್ಣಶೆಟ್ಟಿ ಮೊದಲಾದವರೇ ಪಾರತಂತ್ರ್ಯದ ಸಂಕೇತವಾದ ದಿವಾನ್ ಬಹಾದ್ದೂರ ಪದವಿ ಪಡೆದುಕೊಂಡಾಗ, ಆ ಸಂಸ್ಥೆಯಿಂದ ವಸಾಹತುಶಾಹಿಯನ್ನು ವಿರೋಧಿಸುವ ಸಾಹಿತ್ಯ ಹುಟ್ಟುವುದು ಹೇಗೆ ಸಾಧ್ಯ ? ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದ ಫ, ಗು, ಹಳಕಟ್ಟಿ ಮೊದಲಾದವರು ಆಂಗ್ಲರಿಂದ ರಾವ್‌ಸಾಹೇಬ ಇತ್ಯಾದಿ ಪದವಿಗಳನ್ನು ಪಡೆದಾಗ ಈ ಸಮ್ಮೇಲನಗಳಲ್ಲಿ ತೊಡಗಿಕೊಳ್ಳುತ್ತಲಿದ್ದವರು ಸರಕಾರದ ವಿರುದ್ಧ ಚಳುವಳಿ ಮಾಡುವುದಾದರೂ ಹೇಗೆ ಸಾಧ್ಯ ?

ಹಾಗಾದರೆ ಈ 'ರಮ್ಯಯುಗ' ಸ್ವಾತಂತ್ರ್ಯ ಚಳುವಳಿಯ ಸನ್ನಿವೇಶಕ್ಕೆ ನೀಡಿದ ಕಾಣಿಕೆಯಾದರೂ ಏನು ? ಅದರ ಸ್ವರೂಪವೇನು ? ಎಂದು ಕೇಳಬೇಕಾಗುತ್ತದೆ. ಕಟ್ಟುವುದಕ್ಕಿಂತ ಕೆಡಹುವುದು ಚಳವಳಿಯ ಮುಖ್ಯ ಲಕ್ಷಣ. ಇದಕ್ಕೆ ವಿರುದ್ಧ ವೆಂಬಂತೆ ಸಾಹಿತ್ಯವೆಂಬ ಉಪಕರಣ ಹಿಡಿದು ಆಂಗ್ಲರ ಅಧಿಪತ್ಯವನ್ನು ಕೆಡಹುವ ಧೈರ್ಯವಿಲ್ಲದ ಇವರು, ರಮ್ಯಪ್ರಜ್ಞೆಯೊಂದಿಗೆ ಚಳುವಳಿ ಪ್ರಜ್ಞೆಯಿಂದ ಸ್ವಲ್ಪ ಭಿನ್ನವಾದ ರಾಷ್ಟ್ರೀಯ ಪ್ರಜ್ಞೆಯನ್ನು ಸ್ಥಾಪಿಸುವ ಕೆಲಸಕ್ಕೆ ಸೀಮಿತವಾದರು. ಇವರ ರಾಷ್ಟ್ರೀಯ ಸಾಹಿತ್ಯವು ಚಳುವಳಿಕಾರರಿಗೆ ಸ್ಫೂರ್ತಿ ಕೊಟ್ಟಿರಬಹುದು, ಆದರೆ ಅದು 'ಚಳುವಳಿ ಸಾಹಿತ್ಯ'ವೆನಿಸುವುದಿಲ್ಲ. ಈ ಕಾಲದ ಕುವೆಂಪು ಅವರ 'ಪಾಂಚಜನ್ಯ', ಬೇಂದ್ರೆಯವರ 'ನರಬಲಿ' ಮೊದಲಾದ ಕವನಗಳು ಬ್ರಿಟೀಷರ ವಿರುದ್ಧ ಎತ್ತಿದ ನಿರ್ದಿಷ್ಟ ಧ್ವನಿಯೆನಿಸದೆ, ಕ್ರಾಂತಿಯನ್ನು ಕುರಿತ ಸಾಮಾನ್ಯೀಕೃತ ಧ್ವನಿಯೆನಿಸುತ್ತವೆ. ಕುವೆಂಪು ಅವರ 'ಕಲ್ಕಿ' ಮೊದಲಾದ ಕವನಗಳೂ ಬೇಂದ್ರೆಯ ವರ 'ಮೂವತ್ತು ಮೂರು ಕೋಟಿ', 'ತುತ್ತಿನ ಚೀಲ' ಕವನಗಳೂ ರಾಷ್ಟ್ರೀಯ ಪ್ರಜ್ಞೆಯಿಂದ ಸ್ವಲ್ಪ ಬೇರೆಯಾದ ಸಾಮಾಜಿಕ ಪ್ರಜ್ಞೆಯ ರಚನೆಗಳಾಗಿದ್ದು, ಇವು ಸಾಮಾಜಿಕ ಅನ್ಯಾಯವನ್ನು ಸಾರುತ್ತವೆಯೇ ಹೊರತು ನೇರವಾಗಿ ಬ್ರಿಟಿಷರ ಅನ್ಯಾಯದ ಬಗ್ಗೆ ತುಟಿ ಬಿಚ್ಚುವುದಿಲ್ಲ. ಹೀಗಾಗಿ, ಈ ಕಾಲದ ಬರವಣಿಗೆಯನ್ನು ರಮ್ಯಸಾಹಿತ್ಯವೆನ್ನುವುದಕ್ಕಿಂತ ನವೋದಯ ಸಾಹಿತ್ಯವೆಂದು ಕರೆಯುವುದೇ ಸೂಕ್ತ; ಸ್ವಾತಂತ್ರ್ಯ ಚಳುವಳಿಯ ಸಾಹಿತ್ಯವೆನ್ನುವುದು ಕಷ್ಟ. ಈ ಮಾತನ್ನು ಈ ಕಾಲದ ಸಾಹಿತ್ಯ ಪ್ರಕಾರಗಳಾದ ಕಾವ್ಯ ಕಥೆ ಕಾದಂಬರಿ ನಾಟಕ ಪ್ರಬಂಧಗಳಿಗೂ ಅನ್ವಯಿಸ ಬಹುದಾಗಿದೆ.

ಈ ಯುಗದಲ್ಲಿ ಹುಟ್ಟಿದುದು ಚಳವಳಿಯ ಸಾಹಿತ್ಯವಲ್ಲವೆನ್ನುವುದಕ್ಕೆ ಗಣ್ಯ ಲೇಖಕರ ಒಂದು ಕೃತಿಯೂ ಸರಕಾರದ ಬಹಿಷ್ಕಾರಕ್ಕೆ ಗುರಿಯಾಗಿಲ್ಲದಿರುವುದು. ಬೇಂದ್ರೆಯ ವರನ್ನು ಬಿಟ್ಟರೆ ಯಾವ ಕವಿಯೂ ಸಾಹಿತ್ಯಿಕ ಕಾರಣಕ್ಕಾಗಿ ಬಂಧನಕ್ಕೆ ಒಳಗಾಗದಿ ರುವುದು ಉದಾಹರಣೆ ಎನಿಸಿವೆ. ಬೇಂದ್ರೆಯವರು 'ನರಬಲಿ' ಕವಿತೆ ಬರೆದು ಕೆಲವು ದಿನ ಮುಗದ ಗ್ರಾಮದಲ್ಲಿ ಗೃಹಬಂದಿಯಾದರೇನೋ ನಿಜ. ಆಮೇಲೆ "ಅದು ನೇರ ವಾಗಿ ಬ್ರಿಟಿಷರ ದಬ್ಬಾಳಿಕೆಯನ್ನು ವಿರೋಧಿಸಿ ಬರೆದ ಕವಿತೆಯಲ್ಲ, ಎರಡನೆಯ ಮಹಾಯುದ್ಧದ ನರಬಲಿಯನ್ನು ಕುರಿತು ಬರೆದ ಕವಿತೆ. ಅವರನ್ನು ಬಂಧಿಸಿದುದು ಅವಸರದ ನಿರ್ಣಯವಾಯಿತು" ಎಂದು ತೀರ್ಮಾನಿಸಿ, ಸರಕಾರ ಗಡುವಿಗೆ ಮೊದಲೇ ಬಿಡುಗಡೆ ಮಾಡಿದುದನ್ನು ನೋಡಿದರೆ, ಆ ಕವಿತೆಯ ನಿಜಸ್ವರೂಪ ಗೊತ್ತಾಗುತ್ತದೆ. ಗೊರೂರು, ತ. ರಾ. ಸು., ಕಟ್ಟೀಮನಿ, ಮೊದಲಾದವರು ಸೆರೆಮನೆವಾಸ ಅನುಭವಿಸಿದ್ದರೂ, ಸಾಹಿತಿಯಾಗಿ ಬರೆದುದಕ್ಕಲ್ಲ, ವ್ಯಕ್ತಿಯಾಗಿ

ಚಳುವಳಿಯಲ್ಲಿ ಭಾಗವಹಿಸಿದುದಕ್ಕಾಗಿ. ಆದುದರಿಂದ ಈ ಕಾಲದ ಬರವಣಿಗೆಯನ್ನು ಚಳುವಳಿ ನಿಷ್ಠ ಸಾಹಿತ್ಯವೆಂದು ಬ್ರಿಟಿಷ್ ಸರಕಾರವು ಪರಿಗಣಿಸಿರಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಈ ಗಣ್ಯರೊಂದಿಗೆ ಹೋಲಿಸಿದರೆ, ಅಗಣ್ಯ ಕವಿಗಳು ಮೇಲು. ಅವರು ನೇರವಾಗಿಯೇ ಚಳುವಳಿಯನ್ನು ವಸ್ತುವಾಗಿಟ್ಟುಕೊಂಡು ಪದ್ಯಗಳನ್ನು ಬರೆದರು. ಅಂಥ ಒಂದು ಸಂಕಲನವನ್ನು ಡಾ. ಸೂರ್ಯನಾಥ ಕಾಮತ ಅವರು ಇತ್ತೀಚೆ ಪ್ರಕಟಿಸಿದ್ದಾರೆ. ಲಂಡನ್ನಿನ ಬ್ರಿಟಿಷ್ ಮ್ಯೂಜಿಯಂ ಲೈಬ್ರರಿಯಲ್ಲಿ, ಸ್ವಾತಂತ್ರ್ಯ ಚಳುವಳಿ ಕಾಲದಲ್ಲಿ ಬಹಿಷ್ಕರಿಸಲ್ಪಟ್ಟ ಕನ್ನಡ ಪುಸ್ತಕ ಮತ್ತು ಕರಪತ್ರಗಳ ಒಂದು ಸಣ್ಣ ಕಟ್ಟು ನನಗೆ ಸಿಕ್ಕಿತು. ಅದರಲ್ಲಿ ಆ ಕಾಲದ ಗಣ್ಯ ಸಾಹಿತಿಗಳ ಒಂದೂ ಪುಸ್ತಕವಿರಲಿಲ್ಲ; ಮಹಾರಾಣಿ ಕಿತ್ತೂರು ಚನ್ನಮ್ಮ (ನಾಟಕ–ನಲವಡಿ ಶ್ರೀಕಂಠಶಾಸ್ತ್ರಿ– ೧೯೩೧), ನಾಡಗುಡಿ (ಕಥೆ–ಕೃಷ್ಣ ಹರಿ ಕುಲಕರ್ಣಿ, ಧಾರವಾಡ–೧೯೩೧) ಮೈಸೂರು ಕಾಂಗ್ರೆಸ್ ಇತಿಹಾಸ ಲಾವಣಿ ಪ್ರಬಂಧ (ಲಾವಣಿ– ಬಿ. ನೀಲಕಂಠಯ್ಯನವರ ಶಿಷ್ಯ ವಿಷಕಂಠಯ್ಯ, ಮೈಸೂರು) ಇತ್ಯಾದಿ ಅಗಣ್ಯರ ಕೃತಿಗಳು ಆ ಕಟ್ಟಿನಲ್ಲಿವೆ. ಇವರ ರಚನೆಗಳಲ್ಲಿ ಸಾಹಿತ್ಯಿಕ ಅಂಶವಿರಲಿಕ್ಕಿಲ್ಲ. ಆದರೆ ಚಳುವಳಿಯ ಧ್ವನಿ ವ್ಯಕ್ತವಾಗಿಯೇ ಕೇಳಿಸುತ್ತದೆ. ಶ್ರೀ ನಲವಡಿ ಶ್ರೀಕಂಠಶಾಸ್ತ್ರಿಗಳ ಮಹಾರಾಣಿ ಕಿತ್ತೂರು ಚನ್ನಮ್ಮ ಕೇನಾಟಕವನ್ನು ನೋಡುತ್ತಿದ್ದ ಪ್ರೇಕ್ಷಕರು, ಖಡ್ಗ ಹಿಡಿದು ರಾಣಿ ರಂಗಭೂಮಿಗೆ ಧಾವಿಸುತ್ತಲೇ ಬೋಲೋ 'ಭಾರತಮಾತಾಕಿ ಜೈ' ಎಂದು ಘೋಷಣೆ ಕೂಗುತ್ತ ಎದ್ದು ನಿಲ್ಲುತ್ತಿದ್ದರೆಂಬುದನ್ನು ಇಲ್ಲಿ ಗಮನಿಸಬಹುದು.

ಇವರಿಗಿಂತ ಜನಪದ ಸಾಹಿತಿಗಳು ಇನ್ನೂ ವಾಸಿ. 'ಎಂಥಾ ಶಾಣ್ಯಾ ಮಹಾತ್ಮಾ ಗಾಂಧಿ, ಹಿಂದುಸ್ತಾನಕ ಅವನೇ ತಂದಿ', 'ಕಸ್ತೂರಿಬಾಯಿಯವರೆ ಕಮಲಾದೇವಿಯವರೆ ಸರೋಜಿನಿ ನಾಯಿಡು ಇವರ್ಸ್ಯಾರೆ, ನಾವು ಚಳುವಳಿ ಮಾಡುವರೆ' ಎಂಬಂಥ ಜನಪದ ಹಾಡುಗಳು ಹಳ್ಳಿಪಳ್ಳಿಗಳಲ್ಲಿ 'ವಂದೇ ಮಾತರಂ' ಪದ್ಯದಂತೆ ಕೆಲಸ ಮಾಡಿದವು. ಸ್ವಾತಂತ್ರ್ಯ ಪೂರ್ವದ ಗಣ್ಯರು ತಮ್ಮ ಬರವಣಿಗೆಯಲ್ಲಿ ತಪ್ಪಿಯೂ 'ಚಳುವಳಿ' ಪದ ಬಳಸದ ಸಂದರ್ಭದಲ್ಲಿ ಈ ಗ್ರಾಮೀಣರು ನಿರ್ಭಯವಾಗಿ 'ನಾವು ಚಳುವಳಿ ಮಾಡುವರೆ' ಎಂದು ಹಾಡಿದುದನ್ನು ಇಲ್ಲಿ ಗಮನಿಸಬೇಕು. ಚಳುವಳಿಯನ್ನು ಪ್ರತಿಪಾದಿಸುವ, ಚಳುವಳಿಯನ್ನು ಪ್ರೇರೇಪಿಸುವ ಈ ಬಗೆಯ ಒಂದೂ ಪದ್ಯ ಇಂದಿನ ಶಿಷ್ಟ—ಗಣ್ಯ ಸಾಹಿತ್ಯದಲ್ಲಿ ದೀಪ ಹಚ್ಚಿ ಹುಡುಕಿದರೂ ಸಿಗುವುದಿಲ್ಲವೆಂದೇ ಹೇಳಬೇಕು.

ಇವರಿಗಿಂತ ಪದ್ಯ ಕಟ್ಟುವುದನ್ನೇ ತಮ್ಮ ವೃತ್ತಿ ಮಾಡಿಕೊಂಡಿದ್ದ ಲಾವಣಿಕಾರರಲ್ಲಿ ಸಂಸ್ಥಾನಿಕರ ಯುದ್ಧ ಮತ್ತು ದೇಶಭಕ್ತರ ಚಳುವಳಿಯ ಧ್ವನಿಗಳು ಕಿವಿಗಡಚಿಕ್ಕು

ವಂತೆ ಕೇಳಿಸುತ್ತದೆ. ಆಂಗ್ಲರು ಆಳುತ್ತಿದ್ದ ಕಾಲದಲ್ಲಿಯೇ ಇವರು ಅನ್ಯಾಯಕ್ಕೆ ಮುಖಾಮುಖಿಯಾಗಿಯೇ ಹಾಡುಕಟ್ಟಿದರು. ಸಂತೆ—ಜಾತ್ರೆಗಳಲ್ಲಿ ಹಾಡಿ ಜನ ಸಾಮಾನ್ಯರಲ್ಲಿ ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿ ತುಂಬಿದರು. 'ಕಿತ್ತೂರು ಚನ್ನಮ್ಮನ ಸೊಪಿ' 'ಸಂಗೊಳ್ಳಿರಾಯಣ್ಣನ ದಂಗೆ', 'ಮುಂಡರಗಿ ರಂಗರಾಯನ ಲಾವಣಿ'—ಇವು ಗಾಂಧೀ ಹುಟ್ಟುವ ಮೊದಲೇ ಬ್ರಿಟಿಷರ ವಿರುದ್ಧ ಧ್ವನಿ ಎತ್ತಿದ ರಚನೆಗಳಾಗಿವೆ ಇವು ಆರಿಸಿಕೊಂಡ ವಸ್ತು 'ಸಂಸ್ಥಾನಿಕ ಸತ್ತೆ', 'ವಸಾಹತು ಸತ್ತೆ' ಎಂಬ ಎರಡು ಪ್ರತಿಗಾಮಿ ಸತ್ತೆಗಳು ತಮ್ಮ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ನಡೆಸಿದ ಸ್ಪರ್ಧೆಗಳೇ ಹೊರತು, ನಿಜಾರ್ಥದಲ್ಲಿ ಸ್ವಾತಂತ್ರ್ಯ ಚಳುವಳಿಗಳಲ್ಲವೆಂದು ವಾದಿಸಬಹುದಾದರೂ ಸಂಸ್ಥಾನಿಕರ ಪರವಾಗಿ ನಿಂತು, ಈ ಲಾವಣಿಕಾರರು ಹಾಡುಗಾರಿಕೆಯ ಮೂಲಕ ಬ್ರಿಟಿಷರನ್ನು ವಿರೋಧಿಸಿದುದಂತೂ ಇಲ್ಲಿ ಸ್ಪಷ್ಟವಿದೆ. ಹಡಗಲಿ ಬೇಡರಂಥ ಜನಸಾಮಾನ್ಯರು ನಿರಾಯುಧ ಕಾಯ್ದೆ ವಿರುದ್ಧ ಕೈಕೊಂಡ ಹೋರಾಟ ಸ್ವಾತಂತ್ರ್ಯ ಚಳುವಳಿಯಾಗಿದ್ದರೂ, ಹಿಂಸಾತ್ಮಕ ಸ್ವರೂಪದ್ದಾಗಿದೆ. ಹುಬ್ಬಳ್ಳಿಯಲ್ಲಿ ಆದಾಯ ತೆರಿಗೆಯ ವಿರುದ್ಧ ನಡೆಸಿದ ಚಳುವಳಿ ಸ್ಪಷ್ಟವಾಗಿ ಅಹಿಂಸಾತ್ಮಕ ಉಪವಾಸ ಸತ್ಯಾಗ್ರಹವಾಗಿದೆ. ಇದು ಗಾಂಧೀಜಿ ಪೂರ್ವದಲ್ಲಿ ನಡೆದ ಅಹಿಂಸಾತ್ಮಕ ಸತ್ಯಾಗ್ರಹವೆಂಬುದನ್ನು ಇಲ್ಲಿ ಗಮನಿಸಬೇಕು. ಈ ಎರಡೂ ಘಟನೆಗಳನ್ನು ಕುರಿತು ಅಂದೇ ಲಾವಣಿಗಳು ಹುಟ್ಟಿ ಹಳ್ಳಿ—ಪಟ್ಟಣಗಳಲ್ಲಿ ಪ್ರತಿಧ್ವನಿಸಿದವು.

ನವೋದಯ ಸಾಹಿತ್ಯದ ಬಳಿಕ ಕ್ವಿಟ್ ಇಂಡಿಯಾ ಚಳುವಳಿ (೧೯೪೨)ಯ ಜೊತೆಗೇ ಕಣ್ಣು ತೆರೆಯಿತು, ಪ್ರಗತಿಶೀಲಸಾಹಿತ್ಯ. ನವೋದಯದವರ ಉದ್ದೇಶ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸುವುದಾಗಿದ್ದರೆ, ಹೆಚ್ಚಿನದಾಗಿ ಪ್ರಗತಿ ಶೀಲರದು ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದಾಗಿತ್ತು. ಇವರು ಬೇಂದ್ರೆ, ಕುವೆಂಪು ಅವರಂತೆ ಸರಕಾರೀ ನೌಕರಿ ವೃತ್ತಿಯವರಲ್ಲ. ಸಾರ್ವಜನಿಕ ಲೇಖನವೃತ್ತಿಯವರು. ಕಾರಂತ, ಮಾಸ್ತಿಯವರಂತೆ ಮೇಲ್ವರ್ಗದವರಲ್ಲ: ಬೀದಿ ಯಲ್ಲಿ ಬೆಳೆದವರು. ಇವರಲ್ಲಿ ಚಟುವಟಿಕೆ, ಚಲನವಲನ ಹೆಚ್ಚು. ಚಲನವಲನದ ತದ್ಭವವೇ ಚಳುವಳಿ. ಸಾಹಿತ್ಯವು ಪ್ರಯೋಗವಾಗುವುದನ್ನು ಬಿಟ್ಟು ಚಳುವಳಿ ರೂಪ ಪಡೆಯುವುದು ಇಂಥವರಿಂದ ಎಂಬುದನ್ನು ಇವರು ಬರೆದು ತೋರಿಸಿದರು. ಆದರೆ ಇದು ಸಾಮಾಜಿಕ ಚಳುವಳಿಯೇ ಹೊರತು ಶುದ್ಧಾಂಗವಾಗಿ ಸ್ವಾತಂತ್ರ್ಯ ಚಳುವಳಿಯಲ್ಲ. ಹೀಗಿದ್ದೂ ಬಸವರಾಜ ಕಟ್ಟೀಮನಿಯವರ ಬರವಣಿಗೆಯಲ್ಲಿ ಒಂದಿಲ್ಲ ಒಂದು ರೀತಿಯಿಂದ ಸ್ವಾತಂತ್ರ್ಯ ಚಳುವಳಿಯ ಧ್ವನಿ ಸ್ಫೋಟಗೊಳ್ಳುವ ಹವಣಿಕೆ ಆಗಾಗ ಕಂಡುಬರುವುದು ವಿಶೇಷವಾಗಿದೆ. ದುರ್ದೈವದ ಸಂಗತಿ

ಯೆಂದರೆ ಈ ಬರೆವಣಿಗೆ ಕಥೆ-ಕಾದಂಬರಿಗಳಿಗೆ ಮಾತ್ರ ಸೀಮಿತವಾಯಿತು. ಇದಕ್ಕೆ ಕಾರಣ ಕನ್ನಡ ಪ್ರಾಧ್ಯಾಪಕರ ಕೊಡುಗೆಯಾದ ನವೋದಯ ಪರಂಪರೆಯನ್ನು ಮೂಲೆಗೆ ಸರಿಸಿ ಬಂದಿದ್ದ ಈ ಪ್ರಗತಿಶೀಲರು ಇನ್ನೂ ಬೆಳೆಯುತ್ತಿದ್ದಂತೆಯೇ, ಇವರನ್ನು ನವ್ಯದ ಮೂಲಕ ಇಂಗ್ಲಿಷ್ ಪ್ರಾಧ್ಯಾಪಕರು ಮೂಲೆಗೆ ತಳ್ಳಿದರು. ಶೈಕ್ಷಣಿಕ ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್‌ದಿಂದ ಬಳಲುತ್ತಿದ್ದ ಇವರು ಇಂಗ್ಲಿಷ್ ಪದವೀಧರರ ಅಟ್ಟಹಾಸದ ಎದುರು ಸಹಜವಾಗಿಯೇ ಅಧೀರರಾದರೆಂದು ತೋರುತ್ತದೆ. ಈಗ ಮತ್ತೆ ಕನ್ನಡ ಪ್ರಾಧ್ಯಾಪಕರ ಯುಗದಲ್ಲಿಯಂತೆ ಈ ಇಂಗ್ಲಿಷ್ ಪ್ರಾಧ್ಯಾಪಕರ ಯುಗದಲ್ಲಿ ಚಳುವಳಿ ಪ್ರಜ್ಞೆ ತಣ್ಣಗಾಗಿ. ನವ್ಯವೆಂಬ ಪ್ರಯೋಗ ಪಜ್ಞೆ ಬೆಳೆಯಿತು. ಅದೇನೇ ಇದ್ದರೂ ಸ್ವಾತಂತ್ರ್ಯ ಚಳುವಳಿ ಮುಗಿದ ಬಳಿಕ, ಅಂದರೆ ೧೯೫೦ರ ಸುಮಾರಿಗೆ ತೆರೆದುಕೊಂಡ ಈ ನವ್ಯಸಾಹಿತ್ಯಕ್ಕೆ ಕೆಲವೊಮ್ಮೆ ಸ್ವಾತಂತ್ರ್ಯ ಚಳುವಳಿ ವಸ್ತುವಾಗಿದ್ದರೂ, ಭಯದ ವಾತಾವರಣ ನಿವಾರಣೆಯಾದ ಬಳಿಕ ಹುಟ್ಟಿದ ಅದನ್ನು ಸ್ವಾತಂತ್ರ್ಯ ಹೋರಾಟದ ಕಲಾತ್ಮಕ ಅಭಿವ್ಯಕ್ತಿಯೆಂದೇ ಹೇಳಬೇಕಾಗುತ್ತದೆ. "ಸೋಜಿಗದ ಸಂಗತಿಯೆಂದರೆ ಸ್ವಾತಂತ್ರ್ಯಪೂರ್ವದ ಹೋರಾಟದ (ಸಾಹಿತ್ಯಕ) ಚಿತ್ರಣವೆಲ್ಲವೂ ಸ್ವಾತಂತ್ರ್ಯ ಬಂದಮೇಲೆಯೇ ನಡೆದಿದೆ" ಎಂಬ ವಿ. ಸೀ. ಅವರ ಮಾತನ್ನು ಇಲ್ಲಿ ನೆನೆಯಬಹುದು.

ಈ ಯುಗದಲ್ಲಿ 'ರಾಷ್ಟ್ರೀಯ ಪ್ರಜ್ಞೆ'ಯನ್ನು ವ್ಯಕ್ತಿಯಾಗಿ ಬದುಕದೆ ಸಾಹಿತಿಯಾಗಿ ಬರೆದವರು ಸಿಗಬಹುದು; ವ್ಯಕ್ತಿಯಾಗಿ ಬದುಕಿದವರೂ ಸಾಹಿತಿಯಾಗಿ ಬರೆದವರೂ ಸಿಗಬಹುದು. 'ಸ್ವಾತಂತ್ರ್ಯ ಚಳುವಳಿ'ಯ ವಿಷಯವಾಗಿ ಹೇಳುವುದಾದರೆ ಅವನ್ನು ವ್ಯಕ್ತಿಯಾಗಿ ಬದುಕಿದವರು ಸಿಗಬಹುದಾದರೂ ಸಾಹಿತಿಯಾಗಿ ಬರೆದವರು ಒಬ್ಬರೂ ಸಿಗುವುದಿಲ್ಲವೆನಿಸುತ್ತದೆ. ಹೀಗಿದ್ದರೂ ಈ ಎರಡೂ ನೆಲೆಗಳಲ್ಲಿ ಕೆಲಸ ಮಾಡಿರುವ ಆರ್. ಆರ್. ದಿವಾಕರ, ಹರ್ಡೇಕರ ಮಂಜಪ್ಪ ಮೊದಲಾದವರಿಗೆ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಥಾನ ಸಿಕ್ಕಿಲ್ಲವೆಂಬುದು ವಿಚಾರಿಸತಕ್ಕ ವಿಷಯವಾಗಿದೆ. ಇವರ ಬರವಣಿಗೆ ಶುದ್ಧ ಸಾಹಿತ್ಯವಲ್ಲವೆಂಬುದೇ ಇದಕ್ಕೆ ಕಾರಣವಾಗಿರಬಹುದು.

ಈ ವರೆಗಿನ ಮಾತುಗಳು ಸ್ವಾತಂತ್ರ್ಯಪೂರ್ವದ ಕನ್ನಡ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿದ್ದು, ಆ ಕಾಲದಲ್ಲಿ 'ಸ್ವಾತಂತ್ರ್ಯ ಚಳುವಳಿ'ಯ ಹೆಜ್ಜೆಗಳಿಗೆ ಬದಲು 'ರಾಷ್ಟ್ರೀಯ ಪ್ರಜ್ಞೆ'ಯ ಹೆಜ್ಜೆಗಳು ಮಾತ್ರ ಮೂಡಿವೆಯೆಂದು ಹೇಳಬಹುದು. ●

# ಕನ್ನಡ ಸಂಸ್ಕೃತಿ ಮತ್ತು ಕನ್ನಡ ವಿಶ್ವವಿದ್ಯಾಲಯ*

ಹಿ. ಶಿ. ರಾಮಚಂದ್ರೇಗೌಡ

ಕನ್ನಡ ವಿಶ್ವವಿದ್ಯಾಲಯ ಈಗ ಮೂರು ವರ್ಷವನ್ನು ಬದುಕುತ್ತಿದೆ. ನಮ್ಮ ತಿಳುವಳಿಕೆ ಮತ್ತು ಮುಗ್ಧತೆಯಿಂದ ತಾಯಿಯಲ್ಲಿ ಏನೆಲ್ಲ ಬಯಸುತ್ತೇವೊ ಅವೆಲ್ಲವನ್ನೂ ಕನ್ನಡ ಕೂಸು ಕನ್ನಡ ವಿಶ್ವವಿದ್ಯಾಲಯದಿಂದ ಬಯಸುತ್ತಿದೆ.

**ಕನ್ನಡದ ಗುರುತು :**

ನಮ್ಮ ಹೆಚ್ಚಿನ ಮಂದಿ ನಿರಕ್ಷರಸ್ಥರು. ಇತ್ತೀಚೆಗೆ ಸಾಕ್ಷರತಾ ಕಾರ್ಯಕ್ರಮಗಳು ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ನಡೆಯುತ್ತಿವೆ. ಇವು ಮೂಲತಃ ಮೂರಕ್ಷರದ (ಕನ್ನಡ) ಪದವಿ ಕೊಡುವಂಥವು. ಎಂದರೆ, ವ್ಯಕ್ತಿ ತನ್ನ ಹೆಸರನ್ನು ಕನ್ನಡದಲ್ಲಿ ಬರೆಯುವುದು ಮತ್ತು ತಾನೊಬ್ಬ ಕನ್ನಡ ಬಲ್ಲವನು ಎಂದು ಗುರುತಿಸಿಕೊಳ್ಳುವುದು ವೈಚಾರಿಕವಾಗಿ ಇದು ಅಂಥ ದೊಡ್ಡ ಕೆಲಸ ಅಲ್ಲ. ಬಹಳ ಶತಮಾನಗಳಿಂದ ಒಂದು ಜಾಗ ಒಂದು ಸೂರು ಇಲ್ಲದ ಜನರಿಗೆ ದೇವರಾಜ ಅರಸು ಒಂದು ಚಿಕ್ಕ ಮನೆ ಕೊಟ್ಟ ಹಾಗೆ; ಕನ್ನಡದವನು ಎಂದುಕೊಳ್ಳಲು ದಾಖಲೆ ಇಲ್ಲದವನಿಗೆ ಕನ್ನಡದಲ್ಲಿ ಸಹಿ ಮಾಡಲು ಕಲಿಸಿದಾಗ ಅವನಿಗೆ ಒಂದು ಐಡೆಂಟಿಟಿ ಬಂದು ಪುಳಕಗೊಳ್ಳುತ್ತಾನೆ. ಕಾಲ ಮತ್ತು ಸ್ಥಳದಿಂದ ಆತ ದಾಖಲುಗೊಳ್ಳುತ್ತಾನೆ. ಆದರೆ ಕರ್ನಾಟಕದ ಸಾಕ್ಷರತಾ ಆಂದೋಲನಗಳು ಕನ್ನಡವನ್ನೇ ಕಲಿಸುತ್ತವೆ ಎಂದು ಹೇಳಲಾಗದು. ಆಯಾ ಜನರ ಭಾಷೆಯಲ್ಲಿ ಅಕ್ಷರ ಕಲಿಸುತ್ತವೆ ಅಷ್ಟೆ.

**ಕನ್ನಡ ಪ್ರಜ್ಞೆ;**

ಅಕ್ಷರ ಕಲಿತ ಮಾತ್ರಕ್ಕೆ ಕನ್ನಡ ಪ್ರಜ್ಞೆ ಬರುತ್ತದೆ ಎಂದು ತಿಳಿಯಬೇಕಿಲ್ಲ. ಕನ್ನಡ ಅಕ್ಷರ ಕಲಿತವನಿಗೆ ಸ್ವಲ್ಪ ಮಟ್ಟಿಗೆ ಕನ್ನಡ ಪ್ರಜ್ಞೆ ಬರಬಹುದು. ಮರಾಠಿ,

* ಕನ್ನಡ ವಿಶ್ವವಿದ್ಯಾಲಯಕ್ಕೆ ಬರೆದುಕೊಟ್ಟ ಲೇಖನ ೧೯೯೨ ಪ್ರಕಟಗೊಂಡಿಲ್ಲ.

ಉರ್ದು, ಮತ್ತಿತರ ತಮ್ಮ ತಮ್ಮ ಮಾತೃಭಾಷೆಯಲ್ಲಿ ಕಲಿತವರಿಗೆ ಮಾತೃಭಾಷೆಯ ಪ್ರಜ್ಞೆ ಹುಟ್ಟುತ್ತದೆ. ಕನ್ನಡ ಪ್ರಜ್ಞೆಯನ್ನು ತರುವ ಕೆಲಸ ಕನ್ನಡ ವಿಶ್ವ ವಿದ್ಯಾಲಯದ್ದು. ಕನ್ನಡ ಕಲಿತ ಪ್ರತಿಯೊಬ್ಬ ವ್ಯಕ್ತಿಯೂ ಕನ್ನಡ ವಿಶ್ವವಿದ್ಯಾಲಯದ ಆಜೀವ ಸದಸ್ಯನಾಗಬೇಕು ಎಂದರೆ, ಚಂದಾ ಕೊಟ್ಟು ಅಲ್ಲ, ಮನಸ್ಸಿನೊಂದಿಗೆ. ಈ ಕನ್ನಡ ಮನಸ್ಸೆ ಕನ್ನಡ ವಿಶ್ವವಿದ್ಯಾಲಯದ ಆಸ್ತಿ, ಹಾಗೂ ಕರ್ನಾಟಕದ ಭದ್ರತೆ. ಶ್ರೀಮಂತರು, ರಾಜಕಾರಣಿಗಳು, ನೌಕರ ವರ್ಗದವರು ಮತ್ತು ಹೊರದೇಶಗಳಲ್ಲಿ ಜೀವವಿಟ್ಟು ದೇಹ ಮಾತ್ರದಿಂದ ಇಲ್ಲಿ ಇರುವವರಿಂದ ಈ ಮನಸ್ಸನ್ನು ನಿರೀಕ್ಷಿಸಲಾಗದು. ಕನ್ನಡ ಭಾಷೆ, ನೆಲ, ಜಲದಿಂದ ದೂರವಾಗದ, ದೂರವಾಗಿ ಬದುಕಲು ಸಾಧ್ಯವಿಲ್ಲದ ಕನ್ನಡ ಜನ ಕನ್ನಡ ವಿಶ್ವವಿದ್ಯಾಲಯದ ಪ್ರಾಥಮಿಕ ಸದಸ್ಯರು. ಕರ್ನಾಟಕದ ನೆಲ, ಜಲ, ಜೀವನ ಮತ್ತು ಸಂಸ್ಕೃತಿಗೆ ಬೆಲೆ ಬರಬೇಕಾದರೆ ಇವರನ್ನು ಹೆಚ್ಚು ಪ್ರಜ್ಞಾವಂತರನ್ನಾಗಿ ಮಾಡಬೇಕು. ಅಂದರೆ ಕನ್ನಡದ, ಕರ್ನಾಟಕದ ಕೇಂದ್ರ ಪ್ರಜ್ಞೆ ಕನ್ನಡ ವಿಶ್ವವಿದ್ಯಾಲಯವಾಗಬೇಕು.

**ಕನ್ನಡತನ : ಹಿಂದೆ - ಮುಂದೆ**

ಈಗ ಕನ್ನಡಿಗರಲ್ಲಿ ಕನ್ನಡತನ ಕಡಿಮೆ, ಅನ್ಯತ್ವವೆ ಹೆಚ್ಚು. ಕನ್ನಡ ಜನ ಕರ್ನಾಟಕಕ್ಕಾಗಿ ಚಳುವಳಿ ಮಾಡಬೇಕು ಎಂಬ ಮಾತುಗಳು ಎಲ್ಲ ಕಡೆಯಿಂದ ಕೇಳಿಬರುತ್ತಿವೆ. ಈ ಮಾತುಗಳ ಒಳಹೊಕ್ಕು ನೋಡಿದಾಗ ಅನ್ಯ ಭಾಷಿಗರಿಂದ ಕನ್ನಡಕ್ಕೆ ಆಪತ್ತು ಬಂದಿದೆ ಎಂಬ ಜನಜನಿತ ಅಭಿಪ್ರಾಯ ವ್ಯಕ್ತವಾಗುತ್ತದೆ. ಇದೇ ಆಪತ್ತು ನಮ್ಮ ಪಕ್ಕದ ಭಾಷಾ ಸಂಸ್ಥಾನದವರಿಗೆ ಬಂದಿದೆಯೋ ಎಂಬ ಪ್ರಶ್ನೆಯನ್ನು ನಾವೀಗ ತಿಳಿದುಕೊಳ್ಳಬೇಕಿದೆ. ಇಲ್ಲದಿದ್ದಲ್ಲಿ ನಮ್ಮ ಆಲೋಚನೆ ಒಂದು ಪೂರ್ವಾಗ್ರಹಕ್ಕೆ ಒಳಗಾಗಿದೆ ಎಂದಾಗುತ್ತದೆ. ನಾವು ಕಾಲಮಾನದ ದೃಷ್ಟಿಯಿಂದ ಹಿಂದಕ್ಕೆ ಹೋಗಲು ಹೀಗೆ ಆಲೋಚಿಸುತ್ತಿದ್ದೇವೆಯೋ ಅಥವಾ ಮುಂದಕ್ಕೆ ಹೋಗಲೊ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಕನ್ನಡ ಭಾಷೆ – ಅಭಿಮಾನದ ಮೂಲಕ ನಮ್ಮ ಗತಕಾಲದ ವೈಭವಕ್ಕೆ ಹಿಂತಿರುಗಿದ್ದೇವೆ ಎಂದಾದರೆ ನಮ್ಮನ್ನು ಯಾರೂ ಕ್ಷಮಿಸಲಾರರು. ನಮ್ಮ ಅನೇಕ ಕನ್ನಡ ಹೋರಾಟಗಾರರ ಪ್ರಜ್ಞೆ ಈ ಮೂಲದಿಂದ ಪ್ರೇರಿತವಾಗಿದೆ ಎಂದು ನನಗೆ ಅನಿಸಿದೆ. ಈ ಮನೋಧರ್ಮ ಕರ್ನಾಟಕದ ಒಳಗೆ ಸ್ತಬ್ಧತೆಯನ್ನು ಉಂಟು ಮಾಡುತ್ತದೆ. ಇದರಿಂದ ಸ್ತಬ್ಧತೆಯಲ್ಲಿ ಇರುವ ಜನ ಅಲ್ಲೇ ಇದ್ದು, ಚಲಿಸುವವರು ಮಾತ್ರ ತಮ್ಮ ಅವಕಾಶಗಳನ್ನು ವಿಸ್ತರಿಸಿಕೊಳ್ಳಲು ಅನುಕೂಲವಾಗುತ್ತದೆ.

**ಕನ್ನಡ : ಒಳ – ಹೊರಗೆ**

ನಮ್ಮ ಹಾಗೆಯೇ ತಮಿಳು ನಾಡು, ಕೇರಳ ಮತ್ತು ಆಂಧ್ರ ಪ್ರದೇಶಗಳಲ್ಲಿ ತಮ್ಮ ತಮ್ಮ ಭಾಷಾಸಂಸ್ಕೃತಿಯ ಬಗ್ಗೆ ಆತಂಕ ಇದೆಯೆ ಎಂಬುದನ್ನು ಪರಿಶೀಲಿಸೋಣ.

ಜೊತೆಯಲ್ಲಿಯೇ ಈ ಭಯ ಆಂತರಿಕವಾದುದೊ ಅಥವಾ ಹೊರಗಿನದೊ ಎಂಬು ದನ್ನೂ ತಿಳಿಯುವುದು ಒಳಿತು. ಕರ್ನಾಟಕಕ್ಕೆ ಇರುವ ಗಡಿ ಸಮಸ್ಯೆ ಇತರ ದಕ್ಷಿಣ ಭಾರತದ ರಾಜ್ಯಗಳಿಗೆ ಇಲ್ಲ ಎಂಬುದು ಸ್ಪಷ್ಟ. ಅನ್ಯ ಭಾಷೀಯರ ಆಕ್ರಮಣದ ಬಗ್ಗೆ ಕೇರಳ, ತಮಿಳುನಾಡು ಮತ್ತು ಆಂಧ್ರಗಳಲ್ಲಿ ಗಲಾಟೆಗಳು ಮತ್ತು ಚಳುವಳಿ ಗಳು ಇದ್ದಂತಿಲ್ಲ. ಅಥವ ಈ ಬಗ್ಗೆ ನನಗೆ ತಿಳುವಳಿಕೆಯ ಕೊರತೆ ಇದ್ದಿರಬಹುದು. ಬೆಂಗಳೂರು ಮತ್ತು ಬಾಂಬೆಯಲ್ಲಿ ಆಯಾ ಸಂಸ್ಥಾನದ ಭಾಷಾಸಂಸ್ಕೃತಿಗೆ ಆಪತ್ತು ಇದೆ ಎಂಬ ಮಾತು ಆಗಾಗ ಕೇಳಿಬರುತ್ತಿದೆ. ಈ ಅಭಿಪ್ರಾಯವನ್ನು ಸಮರ್ಥಿಸು ವಂತೆ ಬೆಂಗಳೂರು ಮತ್ತು ಬಾಂಬೆಯನ್ನು ಕೇಂದ್ರಾಡಳಿತ ಪ್ರದೇಶವೆಂದು ಘೋಷಿಸ ಬೇಕೆಂಬ ಹೇಳಿಕೆಗಳು ಕೇಳಿಬರುತ್ತಿವೆ.

ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ಇವುಗಳ ಭಾಷಾ ಸಂಸ್ಕೃತಿಗೆ ಹೊರಗಿನ ಬೆದರಿಕೆ ಇಲ್ಲ ಅಂದಾದರೆ ಇವರು ಆಂತರಿಕವಾಗಿ ಸುಸಂಘಟಿತರಾಗಿದ್ದಾರೆ ಎಂದೆ ತಿಳಿಯಬೇಕು; ಇಲ್ಲವೆ ಭಾರತದ ಹಿಂದಿ ಸಾಮ್ರಾಜ್ಯಶಾಹಿಯಿಂದ ಕರ್ನಾಟಕ ಹೆಚ್ಚು ಹೆದರಿದೆ ಎಂದು ಭಾವಿಸ ಬೇಕು. ದೆಹಲಿಯನ್ನು ಕೇಂದ್ರ ಎಂದು ಒಪ್ಪಿ ಕೊಂಡ ಕ್ಷಣದಿಂದ ಆ ಪ್ರಭುತ್ವದ ಹೊರೆಯನ್ನು ಹೊರಲು ಅಧೀನ ಸಂಸ್ಕೃತಿಗಳು ಅನ್ಯಮಾರ್ಗವಿಲ್ಲದೆ ತಯಾರಾಗಬೇಕು. ಆದರೆ ಈ ಬಗೆಯ ಹೊರೆ ಸಹ್ಯವೇನೂ ಆಗಬೇಕಿಲ್ಲ. ಸುಸಂಘಟಿತವಾದ ಯಾವುದೆ ಸಂಸ್ಕೃತಿ ಈ ಬಗೆಯ ಹೇರಿಕೆಯನ್ನು ಸಮರ್ಥವಾಗಿ ಎದುರಿಸಬೇಕು. ಈ ಕೆಲಸವನ್ನು ತಮಿಳುನಾಡು, ಕೇರಳ ಮತ್ತು ಆಂಧ್ರ ಪ್ರದೇಶಗಳು ಮಾಡಿದ್ದರೆ ಅಲ್ಲಿಯ ಜನ ಮತ್ತು ನಾಯಕತ್ವ ಸುಸಂಘಟಿತ ಮತ್ತು ಸಾಂಸ್ಕೃತಿಕ ನೆಲೆಯ ಗಟ್ಟಿತನಕ್ಕೆ ಬದ್ಧರಾಗಿದ್ದಾರೆ ಎಂದು ತಿಳಿಯ ಬಹುದು.

ಇಂಥ ಮಾತು ಬಂದಾಗ ಸ್ವ ಸಂಸ್ಕೃತಿಯ ಸಂಘಟನಾತ್ಮಕ ಅಭಿವೃದ್ಧಿಯ ಬಗ್ಗೆ ತಿಳುವಳಿಕೆ ಇಲ್ಲದವರು ಇದು ಪ್ರತ್ಯೇಕತಾವಾದ ಎಂದು ಬೊಗಳುತ್ತಾರೆ. ಚಿಂತನೆ ಇಲ್ಲದ ಪ್ರಜೆ ಮತ್ತು ಬುರುಗು ನಾಯಕತ್ವ ಇರುವ ಕಡೆ ಈ ಬಗೆಯ ಪ್ರತಿಕ್ರಿಯೆಗಳು ಸಾಮಾನ್ಯ. ಹಾಗೆಯೇ ಸ್ವ ಸಂಸ್ಕೃತಿಯ ಸಂಘಟನೆಯನ್ನು ಸ್ವಹಿತಕ್ಕೆ ಬಳಸಿಕೊಳ್ಳುವ ಅವಿವೇಕಿಗಳೂ ಇದ್ದಾರೆ. ಸ್ವಂತ ಬಂಡವಾಳ ಅಭಿವೃದ್ಧಿಗಾಗಿ ವಿಚಾರವನ್ನು ಬಳಸಿಕೊಳ್ಳುವ ಮಂದಿ ಭಾರತದಲ್ಲಿ ಮೊದಲಿನಿಂದಲೂ ವಾಸ್ತವ್ಯ ಹೂಡಿರುವುದು ನಿಜ, ಅಂದ ಮಾತ್ರಕ್ಕೆ ಉಳಿದವರು ದಾರಿತಪ್ಪಬೇಕಿಲ್ಲ.

### ಕನ್ನಡ ಜನ: ಕನ್ನಡ ಸಂಸ್ಕೃತಿ

ಒಂದು ಭಾಷಿಕಸಂಸ್ಕೃತಿಯ ಸ್ವ ಸಂಘಟನೆ ಎಂದರೆ ಆ ಜನರ ಸುಸಂಘಟನೆ, ಅವರ ಜೀವನದ ಬಗ್ಗೆ ಮತ್ತು ಮುಂದಿನ ಭವಿಷ್ಯದ ಬಗ್ಗೆ ಅರಿವು ಮೂಡಿಸುವ ಕೆಲಸ.

ಕರ್ನಾಟಕದ ನೆಲ, ಜಲ; ಕಾಡು, ಖನಿಜ–ಇವು ಕರ್ನಾಟಕದ ಎಲ್ಲ ಜನರ ಒಟ್ಟು ಆಸ್ತಿ ಹೇಗೊ ಹಾಗೆ, ಈ ಜನರ ಚರಿತ್ರೆ, ಸಂಸ್ಕೃತಿ, ಅಭಿವೃದ್ಧಿ ಹೊಂದಿದ ಸಂಪತ್ತು, ವಿದ್ಯೆ, ಉದ್ಯೋಗ ಇವುಗಳು ಕೂಡ. ಇವನ್ನು ಜನ ಸರ್ಕಾರದ ಆಸ್ತಿ ಎಂದು ತಿಳಿದಿದ್ದಾರೆ. ಪ್ರಜಾ ಪ್ರಭುತ್ವದಲ್ಲಿ ಸರ್ಕಾರದ್ದೆಂಬ ಆಸ್ತಿ ಇರುವುದಿಲ್ಲ; ಅದು ಪ್ರಜೆಗಳದು ಮಾತ್ರ. ತಪ್ಪು ತಿಳುವಳಿಕೆಯಿಂದಾಗಿ ನಮ್ಮ ಜನ ಎಲ್ಲ ಸಂಪತ್ತಿನ ವಹಿವಾಟನ್ನು ಸರ್ಕಾರಕ್ಕೆ ಇಲ್ಲವೆ ಖಾಸಗಿ ಒಡೆಯನಿಗೆ ಬಿಟ್ಟುಕೊಟ್ಟು ಸುಮ್ಮನಿರುತ್ತಾರೆ. ಸಹಜವಾಗಿಯೆ ಸ್ವಹಿತಕರು ತಮ್ಮ ಹಿತಕ್ಕಾಗಿ ಕನ್ನಡದ ಆಸ್ತಿ, ನೆಲ, ಜಲ ಮತ್ತು ಉದ್ಯೋಗಗಳನ್ನು ಅನ್ಯರಿಗೆ ಮಾರಿಕೊಳ್ಳುತ್ತಾರೆ. ಸಂಪತ್ತಿನ ಬಹು ಮಂದಿ ಯಜಮಾನರುಗಳು ಯಾವಾಗಲೂ ಯಾವುದೇ ಸಂಸ್ಕೃತಿಯ ಪಕ್ಷಪಾತರಲ್ಲ, ಹಿತಚಿಂತಕರೂ ಅಲ್ಲ ಎಂಬುದನ್ನು ಜನರು ಅರ್ಥ ಮಾಡಿಕೊಳ್ಳಬೇಕು.

ಜನವೆ ಸರ್ಕಾರ, ಸಂಪತ್ತು, ಸಂಸ್ಕೃತಿ ಮತ್ತು ಭಾಷೆಯ ವಾರಸುದಾರರಾದಾಗ ಆಯಾ ಜನರ ಭಾಷಾ ಸಂಸ್ಕೃತಿ ಸಮೃದ್ಧವಾಗಿಯೂ, ಸಮಕಾಲೀನವಾಗಿಯೂ ಬೆಳೆಯುತ್ತದೆ. ಒಂದು ಕಡೆಯಿಂದ ಇದಕ್ಕೆ ಸರ್ಕಾರದ ಬೆಂಬಲ ಬೇಕು. ಆದರೆ ಮೂಲ ಪ್ರಚೋದನಾ ಕೇಂದ್ರ ಸರ್ಕಾರದ ಹೊರಗೆ, ಜನರಲ್ಲಿ ಇರಬೇಕು. ತುಳಿತಕ್ಕೆ ಒಳಗಾದ ಸಂಪತ್ತು, ಸಂಸ್ಕೃತಿ ಮತ್ತು ಭಾಷೆಗಳನ್ನು ಬೇರೆಯವರಲ್ಲಿ ಕಂಡ ಜನ ಸರ್ಕಾರದ ಹೊರಗಿನ ಪ್ರೇರಣಾ ಕೇಂದ್ರವನ್ನು ಒಪ್ಪುವುದಿಲ್ಲ. ಯಾಕಂದರೆ ಪ್ರಾತಿನಿಧಿಕವಲ್ಲದ ಯಾವ ಸಂಸ್ಥೆಗಳ ಬಗೆಗೂ ಅವರು ನಂಬಿಕೆಯನ್ನು ಕಳಕೊಂಡಿದ್ದಾರೆ. ಉದಾಹರಣೆಗೆ: ನಮ್ಮ ಆಕಾಶವಾಣಿ ಮತ್ತು ದೂರ ದರ್ಶನಗಳು. ಇವು ಜನಗಳಿಗೆ ಆಕರ್ಷಕವಾಗಿ ಕಾಣುವುದೇನೊ ನಿಜ. ಆದರೆ ಅವು ನಮ್ಮವು ಎಂದು ಬಹುತೇಕ ಜನ ತಿಳಿದಿಲ್ಲ. ಅವುಗಳ ಭಾಷೆ, ಸಂಸ್ಕೃತಿ, ವಿಚಾರ ಇಂದಿಗೂ ಜನಪರವಾಗಿಲ್ಲ; ಹಿಂದೂ ಸಂಸ್ಕೃತಿಯ ಜಾತಿ ಅಧಿಕೃತತೆಯಲ್ಲಿಯೆ ಅವು ನರಳುತ್ತಿವೆ. ಈ ಕಾರಣದಿಂದ ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಕಟ್ಟುವ ಯಾವುದೇ ಸರ್ಕಾರದ ಹೊರಗಿನ ಸಂಸ್ಥೆ ಕರ್ನಾಟಕದ ಎಲ್ಲ ಜನರ ಭಾವ-ಭಾಷೆಗಳನ್ನು ಸ್ಪಂದಿಸುವಂತಿರಬೇಕು. ಇದು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾಧ್ಯವಾದರೆ ಅದೊಂದು ಮಹತ್ವದ ಸಾಧನೆಯಾದೀತು.

ಈಗ ಭಾಷಾಸಂಸ್ಕೃತಿ ಎಂಬುದು ಆಯಾ ಭಾಷೆಯನ್ನು ಬಲ್ಲವರ ಉದ್ಯೋಗ ಎಂದು ತಿಳಿಯಲಾಗಿದೆ. ನೌಕರ ವರ್ಗದಲ್ಲಿ ಇದು ಇಂಗ್ಲಿಷ, ಹಿಂದಿ ಮತ್ತು ವಿಜ್ಞಾನ ವಿರೋಧಿ ಎಂಬ ತಪ್ಪು ತಿಳುವಳಿಕೆ ಇದೆ. ಇದು ಸೌಲಭ್ಯಉಳ್ಳ (Privileged) ವರ್ಗದ ಅಭಿಪ್ರಾಯ ಎಂಬುದು ನಿಜ. ನಿಜವಾದ ಭಾಷಾ ಸಂಸ್ಕೃತಿ ಬಡವರ ಸ್ವತ್ತು. ಯಾಕಂದರೆ ಅಭಿವೃದ್ಧಿ ಆರಂಭವಾಗಬೇಕಾದುದು

ಅಲ್ಲಿಂದ ತಾನೆ. ಬಡವ ಆಕಾಶಕ್ಕೆ ಹಾರಿ ಹೋಗಲಾರ, ಅಮೇರಿಕವನ್ನು ತನ್ನ ಮನೆಗೆ ತಂದು ಇಟ್ಟುಕೊಳ್ಳಲಾರ, ಅವನು ಅವನ ಭಾಷಾ ಸಂಸ್ಕೃತಿಯಿಂದ ವಿದ್ಯೆ, ಉದ್ಯೋಗ ಮತ್ತು ಸಂಪತ್ತನ್ನು ಪಡೆಯಬೇಕಿದೆ. ಅದೊಂದೆ ಅವನಿಗಿರುವ ಬದುಕುವ ಮಾರ್ಗ. ಶ್ರೀಮಂತನಂತೆ ಆತ ಏಕಪಕ್ಷೀಯವಾಗಿ ಅಂತರಾಷ್ಟ್ರೀಯ ಆಗಲಾರ. ಹಾಗೆಂದರೆ ಬಡವ ಕೂಪ ಮಂಡೂಕದ ಹಾಗೆ ಇರುವಲ್ಲಿಯೆ ಇದ್ದು ಬಿಡಬೇಕು ಎಂದು ಇದರ ಅರ್ಥವಲ್ಲ. ಆತ ತಾನಿದ್ದಲ್ಲಿಂದ ಜಗತ್ತನ್ನು ಎಟುಕಿಸಿ ಕೊಳ್ಳಲು ಹೊರಡಬೇಕು. ತಾನೇ ಭದ್ರವಿಲ್ಲದವನು ಬೇರೆಯವರನ್ನು ಎಟುಕಿಸಿ ಕೊಳ್ಳುವುದು ಹೇಗೆ ? ಬೇರುಗಳು ಭದ್ರವಾಗಿದ್ದರೆ ತಾನೆ ಮರ ಆ ಕಡೆ, ಈ ಕಡೆಗೆ ಕೈಚೆಲ್ಲಿ ಬೆಳೆಯುವುದು! ಮೊದಲು ಕನ್ನಡಿಗನಾಗಬೇಕಾದುದು ಹೀಗೆ. ಇದು ನಿರ್ಧಾರಾತ್ಮಕ ಗುಣವನ್ನು ಪಡೆಯುವ ರೀತಿ. ಈ ಗುಣ ಇಲ್ಲದವನು ಏನನ್ನೂ ಕಟ್ಟಲಾರ, ಯಾವುದನ್ನು ಮುಟ್ಟಲಾರ; ಈಗಿನ ನಮ್ಮ ಕನ್ನಡಿಗನ ಸ್ಥಿತಿಯು ಹಾಗೆ.

**ಕನ್ನಡ ಸಂಸ್ಕೃತಿ : ಕನ್ನಡ ಚಳುವಳಿಗಳು**

ಗೋಕಾಕ ವರದಿ ಜಾರಿಗಾಗಿ ನಡೆದ ಹೋರಾಟ ಮತ್ತು ಸ್ವಾತಂತ್ರ್ಯ ಪೂರ್ವ ಹಾಗೂ ನಂತರದ ಒಂದು ಕಾಲ ಘಟ್ಟದ ನಾಡ ಪ್ರಜ್ಞೆಯನ್ನು ಬಿಟ್ಟರೆ ಉಳಿದ ಕನ್ನಡ ಚಳುವಳಿಗಳಿಗೆ ಆಳದ ನೆಲೆ ಇದ್ದಂತಿಲ್ಲ. ನಗರದ ಕೆಲವರ್ಗದ ಜನರನ್ನು ಬಿಟ್ಟರೆ ಉಳಿದವರಿಗೆ ಈಗಲೂ ಈ ಚಳುವಳಿಗಳ ಬಿಸಿ ಮುಟ್ಟುವುದಿಲ್ಲ. ಕಾವೇರಿ ಜಲ ವಿವಾದದ ಬಗ್ಗೆ ದಕ್ಷಿಣ ಕರ್ನಾಟಕದ ವಿವಿಧ ಜನ ವರ್ಗಗಳು ಸ್ಪಂದಿಸಿದ ರೀತಿಯನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಇದೇ ಬಗೆಯ ಚಲನೆ ಕನ್ನಡ ಸಂಸ್ಕೃತಿಗೆ ಸಂಬಂಧ ಪಟ್ಟ ವಿಷಯದಲ್ಲಿ ಆಗುತ್ತಿಲ್ಲ. ಇದರ ಅರ್ಥ ಏನು ? ಕನ್ನಡ ಚಳುವಳಿಗಳಲ್ಲಿ ಕನ್ನಡ ತನವಿಲ್ಲವೊ ಅಥವ ಕನ್ನಡಿಗರಲ್ಲಿಯೆ ಕನ್ನಡತನವಿಲ್ಲವೊ ? ಕನ್ನಡಿಗರ ಮೇಲೆ ತಪ್ಪು ಹೊರಿಸುವುದು ಸುಲಭ. ಆ ತಪ್ಪುಗಳನ್ನು ಕನ್ನಡ ಪರ ಚಿಂತಕರು ತಮ್ಮ ಕಡೆಗೆ ತೆಗೆದುಕೊಳ್ಳುವುದು ಆರೋಗ್ಯಕರ. ಲಕ್ಷೋಪ ಲಕ್ಷ ಜನ ಪಕ್ಕದಲ್ಲಿಯೆ ಇದ್ದರೂ, ಕನ್ನಡ ಪರ ಚಳುವಳಿಗಳನ್ನು ಕಣ್ಣು ಮುಂದೆ ಕಾಣುತ್ತಿದ್ದರೂ ಅವರು ಏನೂ ನಡೆಯುತ್ತಿಲ್ಲವೆಂಬಂತೆ ಮೂಕ ಪ್ರೇಕ್ಷಕರಾಗಿರುತ್ತಾರೆ. ಇದು ನಮ್ಮ ಕನ್ನಡ ಚಳುವಳಿಗಳ ಮನೋವಿಕಾರಕ್ಕೆ ಹಿಡಿದ ಕನ್ನಡಿಯಲ್ಲವೆ ?

ನಾನು ಎರಡು ವರ್ಷ ಕೇರಳದಲ್ಲಿದ್ದೆ. ಒಮ್ಮೆಯೂ ಮಲಯಾಳಂ ಉಳಿಸಿ ಎಂಬ ಚಳುವಳಿಯನ್ನು ನೋಡಲಿಲ್ಲ. ಬಹಳ ನೋಡಿದ್ದು ದುಡಿಯುವ ಜನರ ಚಳುವಳಿ ಗಳನ್ನು. ಮಲಯಾಳಿಗಳು ತಮ್ಮ ರಾಜ್ಯದಲ್ಲಿ ಮಲಯಾಳಂ ಭಾಷೆಯನ್ನು ಉಳಿಸುವ ಅಗತ್ಯವಿಲ್ಲ. ಅವರು ತಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಭಾರತ ಹಾಗೂ ಪ್ರಪಂಚದ ಉದ್ದಗಲಕ್ಕೂ ಹರಡಿದ್ದಾರೆ. ತಮ್ಮ ನಾಡಿಗೆ ಪ್ರಪಂಚದ ಎಲ್ಲ

ಕಡೆಯಿಂದ ಸಂಪತ್ತನ್ನು ತಂದು ಹಾಕುತ್ತಾರೆ. ಕರ್ನಾಟಕದವರ ಹಾಗೆ ನಮ್ಮದು ಹೋಯಿತು ಎಂದು ಒಡಕೊಳ್ಳುವ ಸ್ಥಿತಿ ಅವರಿಗೆ ಬಂದಿಲ್ಲ. ಇನ್ನು ಕೆಲವು ದಿನಗಳಲ್ಲಿ ಕೊಡಗನ್ನು ಕೇರಳದ ಭಾಗ ಎಂದು ಘೋಷಿಸಿ ಎಂದು ಅವರು ಕೇಳಬಹುದು. ತಮಿಳರು ಕೂಡ ಕೇವಲ ತಮ್ಮ ನಾಡಿನ ಅಗಲಕ್ಕೆ ಮಾತ್ರ ಗುರುತಿಸಿಕೊಂಡಿಲ್ಲ. ಅವರು ಒಂದು ನಿರ್ದಿಷ್ಟ ಹಾಗೂ ಬಲಿಷ್ಠವಾದ ದ್ರಾವಿಡ ಸಂಸ್ಕೃತಿಯೊಂದಿಗೆ ಗುರುತಿಸಿಕೊಂಡಿದ್ದಾರೆ. ಆದ್ದರಿಂದಲೆ ದೆಹಲಿಯ ಕೇಂದ್ರ ಆಡಳಿತ, ಉತ್ತರ ಭಾರತದ ಜನ ದಕ್ಷಿಣ ಭಾರತದವರೆಂದರೆ ಮದ್ರಾಸಿಗಳು ಎಂದೆ ನಿರ್ಧರಿಸಿದ್ದಾರೆ. ಇದೆಲ್ಲ ಸಾಧ್ಯವಾಗುವುದು ತಮ್ಮದೆ ಆದ ಭಾಷಾ ಸಂಸ್ಕೃತಿಯ ಜೊತೆಗೆ ನಿಷ್ಠೆಯಿಂದ ಬದುಕುವುದರಿಂದ. ಇದು ಧಾರ್ಮಿಕ ನಿಷ್ಠೆಯಂತೆ ರಿಜಿಡ್ ಅಲ್ಲ; ಪೂರ್ಣವಾಗಿಯೂ ಇದು ಜನ, ನಾಡು ನುಡಿಯ ನಿಷ್ಠೆ. ಇದರ ತೀವ್ರ ಕೊರತೆಯೆ ನಮ್ಮ ಸಾಹಿತ್ಯದಲ್ಲಿ ನಾಡ ಪ್ರೇಮದ ಕವನ ಕತೆ ಆಗಿ ಬೇಕು ಬೇಡವಾದಷ್ಟು ಹುಟ್ಟಿರುವುದು.

## ಕನ್ನಡ ನಿಷ್ಠೆ

ಜನ ಸಾಮಾನ್ಯನಿಂದ ಹಿಡಿದು ನಮ್ಮ ರಾಜಕಾರಣಿಗಳ ವರೆಗೆ ಕನ್ನಡ ನಿಷ್ಠೆ ಕಡಿಮೆ. ಅನೇಕರಿಗೆ ಕನ್ನಡ ಎಂದರೇನು ಎಂಬುದೆ ತಿಳಿಯದು, ಜನ ಸಾಮಾನ್ಯರಿಗೆ ತಾವು ಸದಾ ಸೇವಿಸುತ್ತಿರುವ ಜಾಡು ಎಂಬ ನಿರ್ಲಿಪ್ತ ಮನೋಭಾವ. ನೌಕರ ವರ್ಗದವರಿಗೆ ಕನ್ನಡ ಎಂದರೆ ಏನನ್ನೂ ಕೊಡದ ಗೊಡ್ಡು ಹಸು. ಉಳಿದವರಿಗೆ ಅದೊಂದು ಉದ್ರೇಕ. ರಾಜಕಾರಣಿಗಳಿಗೆ ಜನರನ್ನು ಸಮ್ಮೋಹನಗೊಳಿಸುವ ಸುಲಭ ಮಂತ್ರ-ತಂತ್ರ. ಆದ್ದರಿಂದ ಈ ಯಾರೂ ಕನ್ನಡವೊಂದು ನಿರುತ್ಪಾದಕ ಸಂಗತಿ ಎಂದೆ ತಿಳಿದಿದ್ದಾರೆ. ಯಾಕೆಂದರೆ ಭಾರತದಲ್ಲಿ ಮೊದಲಿನಿಂದಲೂ ಜಾತಿಯೆ ಉತ್ಪಾದನೆ ಮತ್ತು ಭೋಗದ ಕೇಂದ್ರ. ಅದಕ್ಕೆ ಎಲ್ಲರ ಪ್ರಥಮ ನಿಷ್ಠೆ ಮತ್ತು ಪೂಜೆ. ಆಗ ಜಾತಿ ಶ್ರೇಷ್ಠರು ಮತ್ತು ಬಹುಸಂಖ್ಯಾತರು ದೇಶ, ಭಾಷಾ ಸಂಸ್ಕೃತಿಯನ್ನು ತಮ್ಮ ಅಳತೆಗೆ ಬೇಕಾದಂತೆ ಕತ್ತರಿಸಿ ಇಟ್ಟುಕೊಳ್ಳುತ್ತಿದ್ದರು. ತಮ್ಮ ನಿರ್ದೇಶನದಂತೆ ಇತರ ಜಾತಿಗಳವರು ಬದುಕಬೇಕೆಂದು ನೀತಿ ನಿರ್ಣಯಗಳನ್ನು ಮಾಡಿದ್ದರು. ಕೆಳಗಿನ ಜಾತಿಗಳವರು ಎಂದೂ ತಮ್ಮ ಹಕ್ಕುದಾರಿಕೆಯನ್ನು ಪ್ರತಿಪಾದಿಸುವಂತಿರಲಿಲ್ಲ. ಆದ್ದರಿಂದಲೆ ಭಾಷೆ, ಸಂಸ್ಕೃತಿಗಳು ಮೇಲಿನವರ ಆಸ್ತಿ ಮತ್ತು ಅವರ ಆಡಳಿತದ ಕಾನೂನುಗಳಾಗಿದ್ದವು.

ಈಗ ಆ ಪರಿಸ್ಥಿತಿ ಇಲ್ಲ. ಮಠ – ಮಂದಿರಗಳಿಗೆ ಕಲ್ಲು ಇಟ್ಟಿಗೆ ಹೊರುವ ಕೂಲಿ ನಿಷ್ಠೆಯಿಂದ ಜನ ಬಿಡುಗಡೆ ಪಡೆಯುತ್ತಿದ್ದಾರೆ. ಇವರಿಗೆ ಕನ್ನಡ - ಸಂಸ್ಕೃತಿಯ ನಿಷ್ಠೆಯು ಅಗತ್ಯವಿದೆ, ಎಂದರೆ ಕನ್ನಡ ನೆಲ-ಜಲ-ಉತ್ಪತ್ತಿಗೆ ಪಾಲುದಾರರು, ಕನ್ನಡ ಸಂಸ್ಕೃತಿಯ ನಿರ್ವಹಣೆಯ ಹಕ್ಕುದಾರರಾಗುವುದು. ಈ ಕನ್ನಡ ನಿಷ್ಠೆಯಿಂದ ಏನು

ಬರುತ್ತದೆ, ಏನೇನು ಸಿಗುತ್ತದೆ ಎಂದು ಕೇಳಬಹುದು. ರೇಷನ್ ಕಾರ್ಡ್ ಸಿಗುವುದಿಲ್ಲ ಎಂದು ಖಂಡಿತ ಹೇಳಬಹುದು. ಕನ್ನಡ ನಿಷ್ಠೆಯಿಂದ ವ್ಯಕ್ತಿಯು ಹಕ್ಕು, ನೆಲದ ಹಕ್ಕು, ಜಲದ ಹಕ್ಕು, ವಿದ್ಯಾಭ್ಯಾಸದ ಹಕ್ಕು, ಉದ್ಯೋಗದ ಹಕ್ಕು, ಉತ್ಪತ್ತಿಯ ಹಕ್ಕು ಮತ್ತು ಬದುಕುವ ಹಕ್ಕುಗಳು ಖಂಡಿತ ಸಿಗುತ್ತವೆ. ಇದೇನು ಭಾರತ ಸಂವಿಧಾನವನ್ನು ಮಾತ್ರ ಹೇಳುತ್ತಿದ್ದೀರಿ ಎಂದು ನಿರಾಸೆಗೊಳ್ಳಬಹುದು. ಕನ್ನಡ ನಿಷ್ಠೆ ಎಂಬದು ಕನ್ನಡ ನೆಲದಲ್ಲಿ ಪಡೆಯುವ ಹಕ್ಕುದಾರಿಕೆ, ಎಂದರೆ, ಈಗ ಈ ಸಂಬಂಧವಾದ ಯಾವ ಸೌಲಭ್ಯಗಳೂ ಇಲ್ಲದವರು, ತ್ರಿಶಂಕು ಸ್ಥಿತಿಯಲ್ಲಿ ಇರುವವರು ಎಲ್ಲರಂತೆ ಎಲ್ಲವನ್ನು ಪಡೆಯುವುದು. ಇಂಗ್ಲೀಷ್ ನಿಷ್ಠೆ, ಜಾತಿ ನಿಷ್ಠೆ, ಸಂಪತ್ತಿನ ನಿಷ್ಠೆ ಇರುವವರು ಎಲ್ಲಿಬೇಕಾದರೂ ಬದುಕುವ ಅನುಕೂಲವನ್ನು ಪಡೆಯುತ್ತಾರೆ. ಕರ್ನಾಟಕದ ನೆಲ ಮತ್ತು ಭಾಷೆಯೊಂದಿಗೆ ಇರುವವನಿಗೆ ಕನ್ನಡ ನಿಷ್ಠೆ ಮತ್ತು ಕನ್ನಡ ಸಂಸ್ಕೃತಿಯನ್ನು ಪಟ್ಟಾಗಿ, ಗಟ್ಟಿಯಾಗಿ ಬೆಳಸಿ ಉಳಿಸಿಕೊಳ್ಳುವುದೊಂದೆ ಸದ್ಯಕ್ಕೆ ಇರುವ ಬದುಕುವ ಮಾರ್ಗ.

ಈ ಕನ್ನಡ ನಿಷ್ಠೆಯನ್ನು ಪಡೆಯುವುದು ಹೇಗೆ ? ಕನ್ನಡ ಸಂಸ್ಕೃತಿಯ ಪ್ರತಿಪಾದನೆ ನಮ್ಮ ಜೀವನ ನಡೆ ಆಗಬೇಕು. ಕನ್ನಡ ಸಂಸ್ಕೃತಿ ಮೂರು ಹಂತದಲ್ಲಿ ತನ್ನ ಸ್ವಂತಿಕೆ ಮತ್ತು ಅನನ್ಯತೆಯನ್ನು ಮೆರೆಯುತ್ತದೆ.

೧) ಕನ್ನಡ ಜನ ಮತ್ತು ಕನ್ನಡ ಭಾಷೆಯೊಂದಿಗೆ ತನ್ನದೆ ಆದ ಪ್ರದೇಶವನ್ನು ಪ್ರತಿಪಾದಿಸುವುದರೊಂದಿಗೆ –

೨) ಕನ್ನಡ ಸಂಸ್ಕೃತಿ ಭಾರತದಲ್ಲಿ ಒಂದು ವಿಶಿಷ್ಟ ಅನನ್ಯತೆಯಾಗಿ ಎದ್ದು ಕಾಣುವುದರೊಂದಿಗೆ –

೩) ಕನ್ನಡ ಸಂಸ್ಕೃತಿ ಬೆಳೆಯಲು ತನ್ನ 'ದೇಶೀಯ' ಅಭಿವೃದ್ಧಿಯೊಂದಿಗೆ ಪ್ರಾಪಂಚಿಕ ಪ್ರಗತಿಯ ಜೊತೆಗೆ ರಚನಾತ್ಮಕವಾಗಿ ಸೇರಿಕೊಂಡು ಮುನ್ನಡೆಯುವುದರೊಂದಿಗೆ.

### ಕನ್ನಡ: ಕನ್ನಡೀಕರಣ

ಕರ್ನಾಟಕದಲ್ಲಿ ಕನ್ನಡವನ್ನು ಕೆಲವು ಜನರ ಭಾಷೆ ಎಂಬಂತೆ ನೋಡುವವರಿದ್ದಾರೆ. ಧರ್ಮ ಮತ್ತು ಭಾಷೆಯ ಜೊತೆಗೆ ಸಂಕುಚಿತ ಸಂಬಂಧ ಹೊಂದಿಸಿರುವ ಜನರ ಅಭಿಪ್ರಾಯವಿದು. ಕನ್ನಡ ಎಂದೂ ಒಂದು ಜಾತಿ, ವರ್ಗ ಅಥವಾ ಧರ್ಮದ ಭಾಷೆಯಾಗಿಲ್ಲ. ಅದೊಂದು ಚಾರಿತ್ರಿಕವಾದ ಸಂಸ್ಕೃತಿಯ ಅಭಿವ್ಯಕ್ತಿ. ಧರ್ಮ ಮತ್ತು ಜಾತಿಗಳನ್ನು ಈಗಲೂ ನಗದು ಮಾಡಿಕೊಳ್ಳುವ ಅವಕಾಶವಿರುವುದರಿಂದ ಸೆಕ್ಯುಲರ್ ಆದ ಭಾಷೆ ಮತ್ತು ಸಂಸ್ಥಾನ ಸಂಸ್ಕೃತಿಗಳನ್ನು ಒಪ್ಪಿಕೊಳ್ಳಲು ಇಷ್ಟ

ಪಡೆದ ಜನ ಇರುವುದು ನಮ್ಮ ಸ್ವಾತಂತ್ರ್ಯದ ಅಣಕ ಮತ್ತು ವಿರೋಧ ಎಂದೇ ಹೇಳಬೇಕಾಗಿದೆ. ಈಗ ಆಗಬೇಕಾಗಿರುವ ಪ್ರಗತಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಜೊತೆಗೆ ಮಾತ್ರ. ಯಾಕೆಂದರೆ ಧರ್ಮಾತೀತ ಒಂದು ಅಸಮಗ್ರ ಅಸ್ತಿತ್ವದ ಮೊದಲ ಘಟಕ ಅದು. ಇದರ ಕೆಳಗೆ ಇರುವ ಪ್ರಾಕೃತ ಘಟಕಗಳಿಗೆ ಪ್ರಗತಿಯ ಆಯುಧವನ್ನು ಕೊಡುವುದು ತರವಲ್ಲ. ಹಾಗೆ ಕೊಟ್ಟರೆ ಅದೊಂದು ಮುಸ್ಲಿಂ ರಾಜ್ಯವೊ, ಕ್ರಿಶ್ಚಿಯನ್ ರಾಜ್ಯವೊ ಇನ್ನೇನೊ ಆಗಬಹುದು. ಆದ ಕಾರಣ ಜಾತ್ಯಾತೀತ ಪ್ರಗತಿಗಾಗಿ ಕರ್ನಾಟಕದಲ್ಲಿಯ ಯಾರೇ ಆಗಲಿ ಮೊದಲು ಕನ್ನಡೀಕರಣಕ್ಕೆ ಒಳಗಾಗಲೇಬೇಕು. ಇದು ಬೇರೆ ಭಾಷಾ ರಾಜ್ಯದಲ್ಲಿರುವ ಕನ್ನಡಿಗರಿಗೂ ಅನ್ವಯಿಸುವ ಮಾತು.

ಬೆಂಗಳೂರಿನ 'ತಿರುವಳ್ಳುವರ್ ಪ್ರತಿಮೆ ಸ್ಥಾಪನೆಯ' ಸಮಸ್ಯೆಯನ್ನೆ ಉದಾಹರಣೆಯಾಗಿ ತೆಗೆದುಕೊಳ್ಳೋಣ. ಒಬ್ಬ ಚಿಂತಕ ದಾರ್ಶನಿಕನಾಗಿ ತಿರುವಳ್ಳುವರ್ ಜಗತ್ತಿಗೇ ಬೇಕಾದ ವ್ಯಕ್ತಿ. ಅವನ ವ್ಯಕ್ತಿತ್ವ ಮತ್ತು ಚಿಂತನೆಗಳು ಕನ್ನಡ ಸಂಸ್ಕೃತಿಗೆ ಅಗತ್ಯ ಬೇಕು, ಆ ಚಿಂತನೆಗಳು ಕನ್ನಡೀಕರಣಗೊಂಡು, ಅಂದರೆ ಸ್ವೀಕಾರಗೊಂಡು ಬರಬೇಕು. ಇದನ್ನು ಚಾರಿತ್ರಿಕ ಅನಿವಾರ್ಯತೆ ಎಂದು ನಾವು ಕರೆಯುತ್ತೇವೆ. ದಕ್ಷಿಣ ಆಫ್ರಿಕಾದ ಮಂಡೇಲ ಕನ್ನಡ ಕಾವ್ಯದಲ್ಲಿ ಅವತರಿಸಿರುವ ಹಾಗೆ. ಹೃದಯವಂತನಾದ ಯಾರೇ ಆದರೂ ಈ ಮಂಡೇಲ ನಮ್ಮವನಲ್ಲ ಎನ್ನಲು ಸಾಧ್ಯವಾದೀತೆ ? ಅವನ ಬಿಡುಗಡೆಯನ್ನು ಭಾರತ ತನ್ನ ಬಿಡುಗಡೆ ಎಂಬಂತೆ ತವಕಿಸಲಿಲ್ಲವೆ ? ತಿರುವಳ್ಳುವರ್ ಕೂಡ ನಮಗೆ ಇದೇ ಮಾರ್ಗದಲ್ಲಿ ಬರಬೇಕು. ಒಬ್ಬ ತಮಿಳ ಎನಿಸದೆ ಎಲ್ಲ ದೇಶ, ಕಾಲ ಮತ್ತು ಜನಾಂಗಗಳ ಚಿಂತನೆಯ ಮೂಲ (Source)ಗಳಲ್ಲಿ ಒಂದು ಎಂಬಂತೆ ಬರಬೇಕು. ಇದರಿಂದ ಮಾನವ ಸಂಸ್ಕೃತಿ, ವಿಶ್ವ ಸಂಸ್ಕೃತಿ ಅಭಿವೃದ್ಧಿಗೊಳ್ಳುತ್ತದೆ. ಅದು ಬಿಟ್ಟು, ತಮಿಳುನಾಡಿನ ತಮಿಳರ ಕೇರಿಯಿಂದ ಬೆಂಗಳೂರಿನ ತಮಿಳರ ಕೇರಿಗೆ ಬಂದರೆ ಹೇಗೆ ? ಇದು ಅಸಹ್ಯ ಮತ್ತು ಅಪರಾಧ. ವಸಾಹತು ಶಾಹಿಯ ಒತ್ತಡ ಹೇರುವ ಮನೋಧರ್ಮ ಇದು. ಸ್ವಾತಂತ್ರ್ಯಾನಂತರ ಬ್ರಿಟಿಷ್ ಅಧಿಕಾರಿಗಳ ಪ್ರತಿಮೆಗಳು ಏನಾಗಿವೆ ಈಗ ? ಅವುಗಳ ಹಿಂದೆ ಜೀವನ ಚಿಂತನೆ ಇದೆಯೆ ? ಅದು ನಮ್ಮ ಬದುಕನ್ನು ಪ್ರಚೋದಿಸುತ್ತಿದೆಯೆ ? ಚಿಲ್ಲರೆ ರಾಜಕೀಯ ಮತ್ತು ಜನಾಂಗವಾದದ ಮೂಲಕ ತಿರುವಳ್ಳುವರ್ ಕನ್ನಡಕ್ಕೆ ಬಾರದಿದ್ದರೆ ಅದು ಆತನ ಪುಣ್ಯ.

### ಕನ್ನಡ : ಅಧ್ಯತೆ

ಐಡೆಂಟಿಟಿಯ ಭಾಷೆ ಮತ್ತು ಸಂಸ್ಕೃತಿ ಹಾಗೂ ಅಸ್ತಿತ್ವದ ಭಾಷೆ ಮತ್ತು ಸಂಸ್ಕೃತಿಯ ನಡುವಿನ ನೆಲೆ ಮತ್ತು ಅಂತರವನ್ನು ಮೊದಲು ನಾವು ಅರ್ಥ ಮಾಡಿಕೊಳ್ಳಬೇಕು. ಕರ್ನಾಟಕದಲ್ಲೇ ಹುಟ್ಟಿ ಬೆಳೆದವರಿಗೆ ಕನ್ನಡ ಭಾಷೆ ಮತ್ತು ಸಂಸ್ಕೃತಿಗಳು ಅಸ್ತಿತ್ವದ

ನೆಲೆಗಳು. ಅವರ ಪಿತೃಗಳಿಂದ ಬಂದಿರುವ ಧರ್ಮ ಅಥವಾ ಜಾತಿಗಳು ಐಡೆಂಟಿಟಿ, ಭಾಷೆ ಮತ್ತು ಸಂಸ್ಕೃತಿಗಳು ಎನಿಸಿಕೊಳ್ಳುತ್ತವೆ. ತೀರಾ ವೈಯಕ್ತಿಕ ಆದವನಿಗೆ ತನ್ನ ಐಡೆಂಟಿಟಿಯು ಪ್ರಶ್ನೆ ಮೊದಲಾಗುತ್ತದೆ. ಪ್ರಭು ಮತ್ತು ಯಜಮಾನ ಸಂಸ್ಕೃತಿಯಲ್ಲಿ ಇದೆ ಪ್ರಧಾನ. ಯಾಕೆಂದರೆ ಈ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಕೂಡ ತಾನೇಕೆ ಯಜಮಾನ ಆಗಬಾರದು ಎಂದು ಯೋಚಿಸುತ್ತಿರುತ್ತಾನೆ. ಇಂಥವರಿಗೆ ಭಾಷೆ – ಸಂಸ್ಕೃತಿ ತಮ್ಮ ವೈಯಕ್ತಿಕತೆಗೆ ಆಧೀನ. ಜನಗಳ ಅಸ್ತಿತ್ವ ಮತ್ತು ಭಾಷೆ ಮುಖ್ಯವಾಗುವುದು ಪ್ರಜಾಪ್ರಭುತ್ವ ಸಮಾಜದಲ್ಲಿ.

ಜನರಲ್ಲಿ (ಜಾತಿ, ವರ್ಗ ಅಲ್ಲ) ಸಂಘಟಿತಾತ್ಮಕತೆ ಬರಲು ನಾಡ ಭಾಷೆ ಮತ್ತು ಸಂಸ್ಕೃತಿಯಾಧಾರಿತ ಜೀವನ ವಿಧಾನ ಬೆಳೆಯಬೇಕು. ಅದಕ್ಕಾಗಿ ಕರ್ನಾಟಕದಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ ಬಲಗೊಳ್ಳಬೇಕು. ಅವನವನಿಗೆ ಅವನನ್ನು ಬಿಡದೆ, ಎಲ್ಲರೂ ಎಲ್ಲರಿಗಾಗಿ ಎಂಬ ಮನೋಧರ್ಮವನ್ನು ಬೆಳೆಸುವುದೇ ನಾಡ ಭಾಷೆ ಮತ್ತು ಸಂಸ್ಕೃತಿಯ ಕೆಲಸ. ಅದನ್ನು ಕನ್ನಡ ವಿಶ್ವವಿದ್ಯಾಲಯ ಮಾಡಬೇಕು.

ಕನ್ನಡ ಭಾಷೆ ಮತ್ತು ಕನ್ನಡ ಸಂಸ್ಕೃತಿಯ ಪರಿಕಲ್ಪನೆ: ಮಾತೃಕಾ (Archi typal) ಪ್ರಧಾನ ಚಿಂತನೆಯಲ್ಲ. ಅದು ನಿರಂತರ ಬೆಳೆಯುವ ಚಿಂತನೆ. ಆದ್ದರಿಂದಲೆ ಬೆಳೆಯುತ್ತಿರುವ ವಿಜ್ಞಾನ, ಸಮಾಜ ಹಾಗೂ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಕನ್ನಡ ಸಂಸ್ಕೃತಿಯನ್ನು ಬೆಳೆಯಲು ಬಿಡಬೇಕು. ಕನ್ನಡಿಗನಾಗಿರುತ್ತ, ಕನ್ನಡ ಸಂಸ್ಕೃತಿಯ ವಿಶೇಷವಾಗಿರುತ್ತ ಕನ್ನಡಿಗ ವಿಶ್ವ ಮಟ್ಟದಲ್ಲಿ ಬೆಳೆದು ನಿಲ್ಲಬೇಕು. ಇದರ ಅರ್ಥ ಒಳಗಿನಿಂದ ಹೊರಕ್ಕೆ ಬೆಳೆದು ಹೊರಗಿನಿಂದ ಒಳಕ್ಕೆ ಬೆಳೆಯುವ ಅನಾರೋಗ್ಯಕರ ಲಕ್ಷಣವನ್ನು ತೋರಬೇಡ ಎಂಬುದೆ ಆಗಿದೆ.

ಕರ್ನಾಟಕದ ಒಳಗೆ ಸೇವಕ, ಜೀತಗಾರ, ಕೂಲಿ, ಕೆಳಗಿನವ, ಅಶುದ್ಧ, ಅಸ್ಪೃಶ್ಯ, ದೂರ ಇಟ್ಟವ ಎಂಬ ನಾಮದೊಡನೆ ಯಾವ ವ್ಯಕ್ತಿಯೂ ಬೆಳೆಯಬಾರದು. ಕನ್ನಡ ಸಂಸ್ಕೃತಿ ಸಮಕಾಲೀನವಾಗಿ ಮಾಡಬೇಕಾದ ಕೆಲಸ ಇದು. ನಾವೆಲ್ಲ ಒಂದು ಭಾಷಿಕ ಸಂಸ್ಕೃತಿಯ ಜನ ಎಂಬ ಮನೋಭಾವದ ಮೂಲ ನೆಲೆ ಇದು. ಈ ಕೆಲಸ ಕನ್ನಡ ವಿಶ್ವವಿದ್ಯಾಲಯದಿಂದ ಸಾಧ್ಯವಾದರೇ ಮಕ್ಕಳಿಂದ ಮುದುಕರವರೆಗೆ ಕನ್ನಡ ವಿಶ್ವವಿದ್ಯಾಲಯವೆಂದರೆ ನಮ್ಮ ಜೀವನ ಚಿಂತನೆಯ, ಬದುಕಿನ ರಾಜಧಾನಿ, 'ವಿಜಯನಗರ' ಎಂದಾಗುತ್ತದೆ...ಬೇರೆ ಸಂಸ್ಥಾನಗಳಲ್ಲಿ ಇರುವ ಭಾಷಾ ವಿಶ್ವವಿದ್ಯಾನಿಲಯಗಳು ಈ ಬಗೆಯ ಕೆಲಸ ಮಾಡುತ್ತಿಲ್ಲ ಎಂಬುದು ನಿಜ. ಹಾಗೆ ಮಾಡದಿದ್ದರೆ ಯಾವುದೇ ಭಾಷಾ ವಿಶ್ವವಿದ್ಯಾಲಯ 'ಪ್ರಾಕೃತ'ದ ಕಟ್ಟಿನೊಳಗೆ ಸೇರಿಹೋಗುತ್ತದೆ ಎಂಬುದು ನನ್ನ ಅಭಿಪ್ರಾಯ. ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧಕರಿಂದ ಹಿಡಿದು ಜನಪರ ಜೀವನ ಚಿಂತನೆ ಇರುವ ಮಹತ್ವದ ವಿದ್ವಾಂಸರು ಇರುವುದರಿಂದ ಆದರದೆ ಒಂದು ದಾರಿ ಸೃಷ್ಟಿಯಾಗಲಿ. ●

ಬಿ. ಎಸ್. ದುಂಡರಡ್ಡಿ

# ಬುಗರಿ

ಎಂದೊ ಸೂರ್ಯ ಹುಡುಗ,
ಎಸೆದ ಬೃಹತ್ ಬುಗರಿ,
ತಿರ್ರನೆ ತಿರುಗುವಾಗ,
ಆಗಾಗ ಬೀಳುವದು ಎಗರಿ.

ನೋವನ್ನು ಕಾರಿ,
ಎಗರಿ ಬಿದ್ದಾಗಲೆಲ್ಲ ಬುಗರಿ;
ಎಲ್ಲೆಲ್ಲೂ 'ಕಿಲಾರಿ' !

ಚಣ ಚಣ ಚಣದಲ್ಲಿ
ನೂರಾರು 'ಊರು ಭಂಗ' !
ಶಸ್ತ್ರರಹಿತ
ರೌದ್ರ ರಣರಂಗ !
ರಣರಹಿತ ಮರಣ ಮೃದಂಗ !!

ಸಂಯಮ ಸಾರುತ್ತಲೆ,
ಆಗಾಗ;
ಯಮಗೆ ಭಾರಿ ಸಹಕಾರಿ;

ಬುಗರಿ ಎಗರಿ ಬಿದ್ದ ರಭಸಕ್ಕೆ ತೂರಿ,
ಅಕಾಲಿಕ ಸಾಮೂಹಿಕ ಗೋರಿ.

ಹುಲಿಯ ಬಾಯಿಂದ
ಬದುಕಿ ಉಳಿದ ಕುರಿಮರಿಯಂತೆ;
ನಿದ್ದೆಯಲ್ಲಿಯೂ ಹೌಹಾರಿ
ಬೆಚ್ಚಿ ಬೀಳುತಿವೆ ಉಳಿದ ನರಮರಿ.
ಕಾಯ ಬಿರಿದರೂ, ಕಾಯಕವ ಸಾರುತ್ತ
ತಿರುಗುತಿದೆ ಬುಗರಿ.
ಸಾವಿನಲ್ಲಿಯೂ ಬದುಕಿನ
ಅನೇಕ ವಿಕೃತ ಮುಖಗಳ
ತೋರುತಿದೆ ಕಿಲಾರಿ!

# ಎಸ್. ಶಿವಾನಂದರ 'ವಿಮರ್ಶೆಯ ಸವಾಲುಗಳು'*

ಶಿವರಾಮ ಪಡಿಕ್ಕಲ್

ಪಾಶ್ಚಾತ್ಯ ವಿದ್ಯಾಕ್ರಮದ ಮಹತ್ವದ ಪರಿಣಾಮಗಳ ಪೈಕಿ ಅದು ನಮ್ಮ ಅರಿವಿನ ವಿಧಾನದಲ್ಲಿಯೇ ತಂದ ಪರಿವರ್ತನೆ ಬಹಳ ಮುಖ್ಯವಾದದ್ದು. ಜಗತ್ತನ್ನು ನೋಡುವ, ಅವರ ವಿದ್ಯಮಾನಗಳನ್ನು ವ್ಯವಸ್ಥೆಗೆ ತಂದುಕೊಳ್ಳುವ, ವರ್ಗೀಕರಿಸುವ ಹೊಸ ವಿಧಾನ ಹಾಗೂ ಪರಿಭಾಷೆಗಳು ವಸಾಹತು ಆಡಳಿತದ, ಇಂಗ್ಲಿಷ್ ವಿದ್ಯಾಕ್ರಮದ ಕಾರಣದಿಂದಾಗಿ ಬಂದು ಸೇರಿಕೊಂಡವು. ಹಾಗೆ ನೋಡಿದರೆ, ಭಾರತೀಯವೆಂದು ಕರೆಯಬಹುದಾದ ಆಕ್ಷರಿಕ ಸಂಸ್ಕೃತಿ ಮತ್ತು ಜ್ಞಾನ ಶಿಸ್ತುಗಳು ವಸಾಹತು ಪೂರ್ವದಲ್ಲಿ ಇದ್ದಿರುವುದು ನಿಜವಾದರೂ ಸಂಸ್ಕೃತ ಕೇಂದ್ರಿತವಾದ ಈ ಚಿಂತನಾಕ್ರಮ ಜನಸಾಮಾನ್ಯರ ಮಟ್ಟದಲ್ಲಿ ಉಪಪ್ರಜ್ಞೆಯ ಮಟ್ಟದಲ್ಲಿ, ಸುಪ್ತ ಚೇತನದ ಮಟ್ಟದಲ್ಲಿ, ಒಂದು ಅಪ್ರಜ್ಞಾ ಪೂರ್ವಕ ಚೌಕಟ್ಟಾಗಿ ಮಾತ್ರ ಅಸ್ತಿತ್ವದಲ್ಲಿತ್ತು. ಉನ್ನತ ತತ್ವ-ವಿಚಾರ, ಜ್ಞಾನ ಸಂಪಾದನೆ ಹಾಗೂ ಕಾವ್ಯ ನಾಟಕಾದಿಗಳ ಚಿಂತನೆ ಮೊದಲಾದ ಜ್ಞಾನಿಕ ಕ್ರಿಯಾಚರಣೆ ಸಮಾಜದ ಉನ್ನತ ವರ್ಗಗಳಿಗೆ ಸೀಮಿತವಾಗಿದ್ದಿತು. ವಸಾಹತು ಆಡಳಿತದ ಫಲವಾಗಿ ಈ ಚಿಂತನೆಗಳ ಜೊತೆಗಿನ ಕರುಳ ಸಂಬಂಧ ಕಡಿದು ಹೋಗಿ ಪಾಶ್ಚಾತ್ಯ ಸಂಸ್ಕೃತಿಯಲ್ಲಿನ ಬೌದ್ಧಿಕ ಚರಿತ್ರೆಯಲ್ಲಿ ನೇಯ್ದು ಹೋಗಿರುವ ವಿಚಾರಗಳು, ವಿಧಾನಗಳು, ಮಾದರಿಗಳು ಆಧುನಿಕ ವಿದ್ಯಾವಂತ ವರ್ಗದ ಸಾಮಾಜಿಕ ಅಗತ್ಯಗಳಿಗನುಸಾರವಾಗಿ ಭಾರತದಂತಹ ತೃತೀಯ ಜಗತ್ತಿನ ದೇಶದಲ್ಲಿ, ಕನ್ನಡದಂತಹ ಸಣ್ಣ ಸಾಂಸ್ಕೃತಿಕ ಸಮುದಾಯದ ನಡುವೆ ಹಲವು ಬಗೆಗಳಲ್ಲಿ ನಿರೂಪಿತವಾದವು, ಬೇರು ತಳೆದವು. ಪಶ್ಚಿಮದ ಸಂಸ್ಕೃತಿಯ ಒಟ್ಟಂದದ ಇತಿಹಾಸದಲ್ಲಿ, ಬೌದ್ಧಿಕ ಚರಿತ್ರೆಯಲ್ಲಿ ಈ ವಿಚಾರ-ಮಾದರಿಗಳು ಹೇಗೆ

* ವಿಮರ್ಶೆಯ ಸವಾಲುಗಳು, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ ೧೯೯೧

ಹಾದು ಬಂದುವು ಎನ್ನುವ ಅರಿವು ಅಷ್ಟಾಗಿ ಬೆಳೆಯದೇ ಮಾದರಿಗಳು ಮಾತ್ರ ಬಳಸಲ್ಪಟ್ಟುದರಿಂದ ಅವುಗಳ ನಿರ್ಧಾರಕ ಪೂರ್ವಗೃಹೀತಗಳನ್ನು ಕುರಿತ ಚರ್ಚೆ ಕನ್ನಡದಲ್ಲಿ ಪುಷ್ಟಿಗೊಂಡು ಬೆಳೆದಿಲ್ಲ. ಇದರಿಂದಾಗಿ ಪಶ್ಚಿಮದ ಬೌದ್ಧಿಕ ಚಟುವಟಿಕೆಯು ಅಂಚಿನಲ್ಲಿ ಅನ್ವಯಾತ್ಮಕವೂ, ಅಲ್ಲಿ ಬೆಳೆಸಿದ ತತ್ವಗಳಿಗೆ ಇಲ್ಲಿ ಉದಾಹರಣೆ ಹುಡುಕಿ ತೋರಿಸುವಂತಹದೂ ಆಗಿರುವ ಸಾದೃಶ್ಯರೂಪೀ ಬೌದ್ಧಿಕ ಚಟುವಟಿಕೆಯೊಂದನ್ನು ನಾವು ಅನಿವಾರ್ಯವಾಗಿ ನಡೆಸುತ್ತಿದ್ದೇವೆ. ಅನುಕರಣೆಯು ಇರುಸು ಮುರುಸಿನ ಅರಿವು ಕೂಡಾ ಈ ಬೌದ್ಧಿಕ ಚಟುವಟಿಕೆಯೊಂದಿಗೆ ಬೆಳೆದು ಬಂದಿದೆ. "ತಿಳುವಳಿಕೆಗೆ ನಾಡಿನ ಗಡಿಗಳಿಲ್ಲ", "ನಾವು ನಮಗೆ ಬೇಕಾದುದನ್ನು ಪಡೆದುಕೊಂಡಿದ್ದೇವೆ" "ಕನ್ನಡ ಸಂಸ್ಕೃತಿಯಲ್ಲಿ ಇನ್ನೊಂದನ್ನು ಪಡೆದು ಸಾಮರಸ್ಯ ಸಾಧಿಸುವ ಶಕ್ತಿ, ಸತ್ವಗಳಿವೆ" "ಕನ್ನಡದ ಸಾಂಸ್ಕೃತಿಕ ವಲಯದೊಳಗಿನಿಂದಲೇ ಜ್ಞಾನಿಕ ರಚನೆಗಳನ್ನು ಬೆಳೆಸಬೇಕಾಗಿದೆ" ಇವೇ ಮೊದಲಾದ ಅನಿಸಿಕೆಗಳಿಗೆ ಈ ಅರಿವು ಕಾರಣವಾಗಿದೆ. ಆದರೆ ವಸಾಹತು ಚರಿತ್ರೆಯ ನಿರ್ಧಾರಕ ಬೆಳವಣಿಗೆಗಳನ್ನು ಅಷ್ಟಾಗಿ ಲಕ್ಷಿಸದೇ, ಸಂಸ್ಕೃತಿಯ ಚಾರಿತ್ರಿಕ ಬೆಳವಣಿಗೆಗಿಂತ ಅದರ ಅಂತಃಸತ್ವವೇನು ಎನ್ನುವುದನ್ನು ಹೆಚ್ಚಾಗಿ ಲಕ್ಷಿಸುವ ಕಡೆಗೆ ಇಂತಹ ಚರ್ಚೆಗಳು ಒಲಿದಿವೆ. ನಾವು ಗೃಹೀತರೂಪದಲ್ಲಿ ಸ್ವೀಕರಿಸಿದ ಪರಿಕಲ್ಪನೆಗಳ ಸಾಂಸ್ಕೃತಿಕ ಇತಿಹಾಸ, ಅವುಗಳು ಪಶ್ಚಿಮದ ಬೌದ್ಧಿಕ ಚರಿತ್ರೆಯಲ್ಲಿ ಹೇಗೆ ಬೆಳೆದಿವೆ, ನೇಯ್ದು ಹೋಗಿವೆ ಎನ್ನುವ ತಿಳುವಳಿಕೆಯಿಂದ ಹುಟ್ಟುವ ಟೀಕೆ ವಿಮರ್ಶೆಗಳಿಂದ ಮಾತ್ರ ಈ ವಸಾಹತು ಪರಿಣಾಮದಿಂದ ನಾವು ಬಿಡುಗಡೆಯಾಗಬಹುದಾಗಿದೆ.

ಎಸ್. ಶಿವಾನಂದ ಅವರ "ವಿಮರ್ಶೆಯ ಸವಾಲುಗಳು" ಕೃತಿಯ ಸಮೀಕ್ಷೆಯ ಹೊತ್ತಿನಲ್ಲಿ ಈ ಮಾತುಗಳು ನನಗೆ ಪ್ರಸ್ತುತವೆನ್ನಿಸಿವೆ. ನಿರ್ವಸಾಹತೀಕರಣವನ್ನು ಸಾಧ್ಯಮಾಡುವಂತಹ ಚಾರಿತ್ರಿಕ ಸಮಾಜೋ – ಸಾಂಸ್ಕೃತಿಕ ವಿಶ್ಲೇಷಣೆಯ ಹಾದಿಯನ್ನು ಈ ಕೃತಿಯ ಬಹುಪಾಲು ಲೇಖನಗಳು ಹಿಡಿದಿವೆ. ಒಂದು ರೀತಿಯಲ್ಲಿ ಸಾಹಿತ್ಯದ ಸಾಮಾಜಿಕ ಅರ್ಥವನ್ನು ವಿಶ್ಲೇಷಿಸಬೇಕೆಂಬುದೇ ಅವರ ವಿಮರ್ಶಾ ಲೇಖನಗಳ ಗಂಭೀರ ಕಾಳಜಿಯಾಗಿದೆ. ಇಷ್ಟಾಗಿಯೂ ಸಾಹಿತ್ಯದ ವಿಶೇಷ ಸ್ಥಾನ, ಅನುಭವದ ವಿಶೇಷೀಕರಣ ಮೊದಲಾದವುಗಳನ್ನು ಕುರಿತು ಪಾಶ್ಚಾತ್ಯ ರೊಮ್ಯಾಂಟಿಕ್ ಗೃಹೀತಗಳಿಂದ ಕನ್ನಡದಲ್ಲಿ ಬೇರು ತಳೆದಿರುವ ಕಲ್ಪನೆಯನ್ನು ಕುರಿತು ಪೂರ್ಣ ಪ್ರಮಾಣದ ವಿಮರ್ಶೆಯನ್ನು ಮಾಡುವುದು ಅವರಿಂದ ಸಾಧ್ಯವಾಗಲಿಲ್ಲ. ಎರಡನೆಯದಾಗಿ ಪಶ್ಚಿಮದ ಬೌದ್ಧಿಕ ಚರಿತ್ರೆಯಲ್ಲಿ ನೇಯ್ದು ಹೋಗಿರುವ ಮಾದರಿಗಳನ್ನು ಅವರು ಆಯ್ದು ಪಡೆಯುತ್ತಾರೆ.

ಕಳೆದ ಹತ್ತು ಹದಿನೈದು ವರ್ಷಗಳಿಂದ ನವ್ಯ ಸಾಹಿತ್ಯ, ನವ್ಯ ವಿಮರ್ಶೆಗಳಿಗೆ ಎದುರು ಬರಹವನ್ನು ನಡೆಸುತ್ತಾ ಬಂಡಾಯ ಸಾಹಿತ್ಯ ಚಳುವಳಿಯ ಕಾಳಜಿಗಳನ್ನು ಮುನ್ನೆಲೆಗೆ ತರಲು ಯತ್ನಿಸಿದವರಲ್ಲಿ ಎಸ್. ಶಿವಾನಂದ ಅವರೂ ಒಬ್ಬರು. ೧೯೭೫ ರಿಂದ ೧೯೮೫ರ ಹತ್ತು ವರ್ಷಗಳ ಅವಧಿಯಲ್ಲಿ ಅವರು ಬರೆದ ಲೇಖನಗಳ ಆಯ್ದ ಸಂಗ್ರಹ "ವಿಮರ್ಶೆಯ ಸವಾಲುಗಳು".

ತಮ್ಮ ವಿಮರ್ಶಾಕ್ರಮವನ್ನು ಅವರು "ಸಮಾಜವಾದೀ ವಿಮರ್ಶೆ" ಎಂದು ಕರೆದುಕೊಂಡಿದ್ದಾರೆ. ನವ್ಯ ವಿಮರ್ಶೆಯು ಬಹುವಾಗಿ ಪ್ರಚುರಪಡಿಸಿದ ಕೃತಿ ವಿಮರ್ಶೆ, ಪ್ರಾಯೋಗಿಕ ವಿಮರ್ಶೆಯ ಟೀಕೆ ಅವರ ಕೃತಿಯಲ್ಲಿ ಎದ್ದು ಕಾಣುವ ಅಂಶವಾಗಿದೆ. ಕನ್ನಡ ನವ್ಯಕ್ಕೆ ಪ್ರತಿಭಟನೆ, ಅದಕ್ಕೆ ಬೆಳೆಸುವ ವಿಮರ್ಶೆ. ನವ್ಯ ಸಾಹಿತ್ಯದ ವರ್ಗ ಮಿತಿಯನ್ನು ಗುರುತಿಸುವ ಯತ್ನದಲ್ಲಿ ಶಿವಾನಂದರು ನಡೆಸಿದ ಸಾಹಿತ್ಯಕ ವಾಗ್ವಾದಗಳು ಇಲ್ಲಿನ ಲೇಖನಗಳನ್ನು ರೂಪಿಸಿವೆ. ಸಾಹಿತ್ಯವನ್ನು ಓದುವುದೆಂದರೆ ಕೇವಲ ಅಕಡೆಮಿಕ್ ಆಸಕ್ತಿಯಿಂದ ಸಾಹಿತ್ಯವನ್ನು ಬಗೆಯುವುದಾಗಲೀ, ಶಬ್ದ ಶರೀರದ ಮಿತಿಯಲ್ಲಿ ಅದನ್ನು ಚರ್ಚಿಸುವುದಾಗಲೀ ಅಲ್ಲ. ಸಾಹಿತ್ಯ ಕೃತಿಯ ಸಾಮಾಜಿಕ ಅರ್ಥ ಮೌಲ್ಯಗಳನ್ನು–ನಿರ್ದಿಷ್ಟವಾಗಿ ಹೇಳುವುದಾದರೆ, ಸಾಹಿತ್ಯದ ರೂಪ ತಂತ್ರಗಳಿಗಿಂತ ಮೊದಲು ಅದರ ತಿರುಳನ್ನು ವಿಶ್ಲೇಷಿಸುವುದು ವಿಮರ್ಶೆಯ ಲಕ್ಷ್ಯವಾಗಬೇಕು ಎನ್ನುವುದನ್ನು ಸಾಬೀತು ಪಡಿಸಲು ಶಿವಾನಂದರು ಯತ್ನಿಸಿದ್ದಾರೆ.

ನವ್ಯ ಚಳುವಳಿಯ ಪ್ರಭಾವೀ ಲೇಖಕರ ಬರವಣಿಗೆಗಳು ಸಾಹಿತ್ಯದ ವಿದ್ಯಾರ್ಥಿಗಳನ್ನು ಪ್ರಭಾವಿಸುತ್ತಿದ್ದ ದಿನಗಳಲ್ಲಿ ಬಂಡಾಯದ ಪರವಾಗಿ, ಅದರಲ್ಲೂ ಜನಪರ ಸಂಸ್ಕೃತಿಯ ಪರವಾಗಿ ಶಿವಾನಂದರು ನಡೆಸಲೆತ್ನಿಸಿದ ಸಾಂಸ್ಕೃತಿಕ ವಾಗ್ವಾದ ಮುಖ್ಯವಾದುದಾಗಿದೆ. ಕನ್ನಡ ನವ್ಯರು ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ಎತ್ತಿ ಹಿಡಿಯುತ್ತಿದ್ದ ನೌಕರಶಾಹೀ ಮಧ್ಯಮ ವರ್ಗದ ಮೌಲ್ಯಗಳನ್ನು, ಸಮಸ್ಯೆಗಳನ್ನು, ಆಸೆ ಆಕಾಂಕ್ಷೆಗಳನ್ನು ಮತ್ತು ಇವೆಲ್ಲದರ ಪರಿಣಾಮವಾಗಿ ಪೃಥಕ್ಕರಿಸಲ್ಪಟ್ಟ ಮೇಲ್ವರ್ಗದವರ ಸಂಸ್ಕೃತಿಯ ಏಕರೂಪೀ ಪರಂಪರೆಯನ್ನು ಬಯಲುಗೊಳಿಸಲು ಶಿವಾನಂದರು ಪ್ರಯತ್ನಿಸಿದ್ದಾರೆ.

ಇಷ್ಟಾಗಿಯೂ ಸಾಹಿತ್ಯವೆಂದರೆ "ಸೃಜನಾತ್ಮಕ" ಬರಹವೆನ್ನುವ ಗೃಹೀತವನ್ನು ಶಿವಾನಂದರು ಎಲ್ಲಿಯೂ ವಿಮರ್ಶೆಗೊಳಪಡಿಸಿಲ್ಲ. ವೈಚಾರಿಕ ಬರವಣಿಗೆಗಳಿಗಿಂತ ಸಾಹಿತ್ಯ ಬೇರೆಯದೇ ಆದ ಒಂದು ಬರವಣಿಗೆ. ಅದರಲ್ಲಿ ಮನುಷ್ಯನ ನೇರ ಅನುಭವಗಳು ಅಭಿವ್ಯಕ್ತಿಗೊಳ್ಳುತ್ತವೆ. ಅನೇಕ ವೈರುಧ್ಯಗಳಿಂದ ಕೂಡಿದ ಪ್ರಾಪಂಚಿಕ

ಅನುಭವಗಳು ಸಾಹಿತ್ಯದ ಮಟ್ಟಕ್ಕೆ ಸ್ಥಾನಾಂತರಗೊಂಡಾಗ ಅವು ಆ ವೈರುಧ್ಯಗಳನ್ನು ದಾಟುವ ಒಂದು ಬಗೆಯ ಅತಿರೇಕದ ಗುಣವನ್ನು ಪಡೆದುಕೊಂಡುಬಿಡುತ್ತವೆ. ಸಾಹಿತ್ಯದಲ್ಲಿ ಅಭಿವ್ಯಕ್ತಿಗೊಳ್ಳುವ ಮೂಲಕ ಈ ಅನುಭವಗಳು ಕಾಲಾತೀತವೂ, ಸಾರ್ವಕಾಲಿಕವೂ ಆಗಿ ಪರಿಣಮಿಸುತ್ತವೆ ಎನ್ನುವ ರೊಮ್ಯಾಂಟಿಕ್ ಸಾಹಿತ್ಯ ಪರಿಕಲ್ಪನೆಯನ್ನು ಕುರಿತ ಆಮೂಲಾಗ್ರ ಟೀಕೆಯನ್ನು ಶಿವಾನಂದರ ಲೇಖನಗಳು ಕಟ್ಟಿಕೊಡುವುದಿಲ್ಲ. ಸಾಹಿತ್ಯವೆನ್ನುವುದೊಂದು ಇದೆ. ಅದು ಮನುಷ್ಯನ ನೇರ ಅನುಭವಗಳ ಅಭಿವ್ಯಕ್ತಿ. ಆದರೆ ದೇಶ-ಕಾಲ_ಜನಗಳ ಪ್ರಭಾವಕ್ಕೆ ಅದೂ ಒಳಪಡುವುದರಿಂದ ಸಾಹಿತ್ಯದ "ಯುಗ ಧರ್ಮ" ಬದಲಾಗುತ್ತಲೇ ಇರುತ್ತದೆ ಎನ್ನುವ ನಿಲುವಿನಿಂದ ಶಿವಾನಂದರ ಲೇಖನಗಳು ಹೊರಡುತ್ತವೆ. ಒಟ್ಟಾಗಿ, ನವೋದಯ ಸಾಹಿತ್ಯ ಮತ್ತು ನವ್ಯ ಸಾಹಿತ್ಯಗಳು ಆಗು ಮಾಡಿದ ಸಾಹಿತ್ಯದ ಪರಿಕಲ್ಪನೆಯನ್ನು ಒಪ್ಪಿಕೊಂಡು ಅದರೊಳಗೆ ಸಾಮಾಜಿಕ ಆಯಾಮವೊಂದನ್ನು ಸೃಷ್ಟಿಸಿಕೊಳ್ಳಲು ಶಿವಾನಂದರು ಯತ್ನಿಸಿದ್ದಾರೆ. ಇದರಿಂದಾಗಿ ವ್ಯಾಪಕಾರ್ಥದಲ್ಲಿ ಅವರು ಸಾಂಪ್ರದಾಯಿಕ ಸಾಹಿತ್ಯ ವಿಮರ್ಶೆಗಳ (ನವೋದಯ/ನವ್ಯ) ಪರಿಭಾಷೆಯನ್ನೇ ಬಳಸುತ್ತಿದ್ದಾರೆ. ಈ ಅಂಶ ಅವರು ಮಾಡಿದ ಪುಸ್ತಕ ವಿಮರ್ಶೆಗಳಲ್ಲಿ ನಿಚ್ಚಳವಾಗಿದೆ. ಈ ಸಂಕಲನದ ಮೊದಲ ನಾಲ್ಕು ಲೇಖನಗಳಲ್ಲಿ ಸಾಮಾಜಿಕ ಜವಾಬ್ದಾರಿ, ಕಲಾತ್ಮಕತೆ, ನವ್ಯ ಸಾಹಿತ್ಯದ ವರ್ಗಪ್ರಣಿತಿ, ಸಾವಯವತೆಯ ಕಲ್ಪನೆಗಳನ್ನು ಸ್ಥೂಲವಾಗಿ ಚರ್ಚಿಸಿದ ಶಿವಾನಂದರು ಪುಸ್ತಕ ವಿಮರ್ಶೆಗಳಲ್ಲಿ ಸಾಮಾಜಿಕ ಅರ್ಥ ಮತ್ತು ಕಲಾತ್ಮಕ ಯಶಸ್ಸುಗಳ ತಮ್ಮ ಕಲ್ಪನೆ ಬೆರೆಸಿದ್ದಾರೆ. "ಅನುಭವದಲ್ಲಿ ಒಳನೋಟ ಇಲ್ಲದಿದ್ದಾಗ-ಶೋಧನಾ ಕ್ರಿಯೆ ನಡೆಯದಿದ್ದಾಗ-ಅನುಭವಕ್ಕೆ ತಾಜಾತನವಾಗಲೀ ಆಳವಾಗಲೀ ಪ್ರಾಪ್ತವಾಗುವುದಿಲ್ಲ." (ಪುಟ ೧೧೧) ಇಂತಹ ಅನೇಕ ಹೇಳಿಕೆಗಳು ಶಿವಾನಂದರಲ್ಲಿ ಸಿಗುತ್ತವೆ. "ಬಂಡಾಯ ಕತೆಗಳ ದಿಕ್ಕು ದೆಸೆ" ಯಂತೂ ಸಾಹಿತ್ಯದ ವಿಶೇಷೀಕರಣವನ್ನು ಒಪ್ಪಿಕೊಂಡು "ಸೃಜನಶೀಲತೆ" "ಸಾಹಿತ್ಯದೊಳಗೆ ಸಾಮಾಜಿಕ ಜವಾಬ್ದಾರಿ" ಇತ್ಯಾದಿ ಮಾತುಗಳನ್ನು ಬಳಸುತ್ತದೆ. ಸೃಜನಶೀಲ × ಯಾಂತ್ರಿಕ; ಕಲಾತ್ಮಕ × ಯಾಂತ್ರಿಕ ಇತ್ಯಾದಿ ಪದ ಪುಂಜಗಳು ನವೋದಯ/ನವ್ಯವನ್ನು ಹಾದು ಬಂದಿರುವ ಪದಗಳು ಮತ್ತು ಅವು ಹೇಗೆ ಬಂಡವಾಳ ಶಾಹೀ ಬೆಳವಣಿಗೆಗಳಿಗೆ ನಿರ್ದಿಷ್ಟ ರೀತಿಯ ಪ್ರತಿಭಟನೆಗಳಾಗಿ, "ಬಂಡವಾಳ ಪೂರ್ವ ಸಮಾಜ ಸಾವಯವದ ಸಮಾಜವಾಗಿತ್ತು" ಎನ್ನುವ ಪರಿಕಲ್ಪನೆಯಿಂದ ಪ್ರಭಾವಿತವಾಗಿವೆ ಎನ್ನುವುದನ್ನು ಶಿವಾನಂದರು ಚರ್ಚಿಸುವುದಿಲ್ಲ.

"ಸಾವಯವ ಶಿಲ್ಪದ ಸಮಗ್ರೀಕರಣ" ಎನ್ನುವ ನವ್ಯರ ನಿಲುವು ಕಾವ್ಯದ ಸಂಕೀರ್ಣತೆಗೆ ಕಾರಣವಾಯಿತು ಎಂದು ಅಸಮಾಧಾನ ವ್ಯಕ್ತಪಡಿಸುವ

ಶಿವಾನಂದರು ಅವರ ಸಾಂಸ್ಕೃತಿಕ ಇತಿಹಾಸವನ್ನು ಅಂದರೆ ಯುರೋಪಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ಮೂಲತಃ ಬಂದ ಪ್ರತಿಗಾಮಿ ನಿಲುವಾಗಿ, ಹೊಸದನ್ನು ಸಂದೇಹಿಸಿ ನೋಡುವ ನಿಲುವಾಗಿ, ಆಧುನಿಕತೆ ಔದ್ಯೋಗೀಕರಣಗಳು ಆಗುಮಾಡಿದ ಕೆಳವರ್ಗಗಳ ಸ್ವಾತಂತ್ರ್ಯದ ಸಾಧ್ಯತೆಗಳನ್ನು ಸಂಪೂರ್ಣ ಅಲ್ಲಗಳೆಯುವ ನಿಲುವಾಗಿ, ಔದ್ಯೋಗೀಕೃತ ಸಮಾಜ ಉಂಟು ಮಾಡಿದ ಸಾಂಸ್ಕೃತಿಕ ನಿರ್ವಾತದಲ್ಲಿ ಹಳೆಯ ಸಾಂಸ್ಕೃತಿಕ ಮೌಲ್ಯಗಳನ್ನು ಕಾಯ್ದುಕೊಂಡು ಬರುವುದು ಅಗತ್ಯ ಎನ್ನುವ ಸಾಹಿತ್ಯಕ ಸಾಂಪ್ರದಾಯಿಕತೆಯಾಗಿ ಈ ಸಾವಯವತೆಯ ಕಲ್ಪನೆ ಹೇಗೆ ಬಳಕೆಯಾಯಿತು ಎನ್ನುವುದನ್ನು ವಾಗ್ವಾದಗೊಳಿಸುವುದಿಲ್ಲ.

ಮಾರ್ಕ್ಸ್‌ವಾದವೆಂದರೆ ಸಿದ್ಧಗೊಂಡಿರುವ ಒಂದು ತತ್ವ ಅಥವಾ ಸಿದ್ಧಾಂತ ಮತ್ತು ಸಾಹಿತ್ಯವೆಂದರೆ ಸ್ವತಃ ಸಿದ್ಧವಾಗಿರುವ ಕೃತಿ ಶ್ರೇಣಿ ಅಥವಾ ಕೆಲವು ಸಾಮಾನ್ಯ ಗುಣಲಕ್ಷಣಗಳಿರುವ ಕೃತಿ ಸಮುದಾಯ ಎಂದು ಅಂದುಕೊಂಡು ಅವುಗಳ ನಡುವಿನ ಸಂಬಂಧವನ್ನು ಶಿವಾನಂದರು ಚರ್ಚಿಸಿದ್ದಾರೆ. ಆದರೆ ಮಾರ್ಕ್ಸ್‌ವಾದ ಇಂದಿಗೂ ಬೆಳೆಯುತ್ತಿರುವ, ತಾತ್ವಿಕ ಬೆಳವಣಿಗೆಗೆ ಮುಕ್ತವಾಗಿರುವ ಒಂದು ತತ್ವವಾಗಿದೆ, ಸಾಹಿತ್ಯವನ್ನು ಕುರಿತ ಅನೇಕ ಪರಿಕಲ್ಪನೆಗಳೂ ಹಾಗೆಯೇ ವಾಗ್ವಾದಕ್ಕೊಳಗಾಗಿವೆ.

ಈ ಮೇಲೆ ವಿವರಿಸಿದ ಪೂರ್ವಗೃಹೀತದಿಂದಾಗಿ ಶಿವಾನಂದರು ಸ್ವಲ್ಪಮಟ್ಟಿಗೆ ಸಾಂಪ್ರದಾಯಿಕ ಎಂದು ಹೇಳಬಹುದಾದ ಮಾರ್ಕ್ಸ್‌ವಾದೀ ವಿಮರ್ಶಕರ ಗೃಹೀತಗಳನ್ನು ಆಧಾರ ಮಾಡಿಕೊಂಡಿದ್ದಾರೆ. ವಿಶೇಷವಾಗಿ ಕಾಡ್‌ವೆಲ್, ಪ್ಲೆಖನೋವ್‌ರ ವಿಚಾರಗಳನ್ನು ಅವರು ಆಧರಿಸಿದ್ದಾರೆ.

"ನಮ್ಮ ಸಾಮಾಜಿಕ ಅಸ್ತಿತ್ವವು ನಮ್ಮ ತಿಳುವಳಿಕೆಯನ್ನು ನಿರ್ಧರಿಸುತ್ತದೆ" ಎನ್ನುವ ಮಾರ್ಕ್ಸ್‌ನ ಅಭಿಪ್ರಾಯವನ್ನು ಒಪ್ಪಿಕೊಂಡು ಆಧಾರ ಮತ್ತು ಊರ್ಧ್ವಬಂಧ [Base and Superstructure]ಗಳ ನಡುವಣ ಸಂಬಂಧವನ್ನು ಯಾಂತ್ರಿಕ ಮತ್ತು ಕಾರ್ಯಕಾರಣ ಬದ್ಧ ಎನ್ನುವ ನಿಲುವಿನಿಂದ ಇಲ್ಲಿ ಸಾಹಿತ್ಯದ ವಿಶ್ಲೇಷಣೆಯೂ ನಡೆಯುತ್ತದೆ. ಸಾಹಿತ್ಯ ಇಲ್ಲಿ ಊರ್ಧ್ವಬಂಧಕ್ಕೆ ಸೇರಿದ ಹಾಗೂ ಆಧಾರವನ್ನು ಪ್ರತಿಫಲಿಸುವಂತಹ ಚಟುವಟಿಕೆಯಾಗಿದೆ. ಉದಾಹರಣೆಗೆ, "ಸಾಹಿತ್ಯದೊಳಗೆ ಸಾಮಾಜಿಕ ಜವಾಬ್ದಾರಿ ಮತ್ತು ಕಲಾತ್ಮಕತೆ" ಲೇಖನದಲ್ಲಿ ಚರಿತ್ರೆಯನ್ನು ವಿವಿಧ ಘಟ್ಟಗಳಾಗಿ ವಿಂಗಡಿಸಿ ಈ ವಿಭಜನೆಗೆ ಅನುಸಾರಿಯಾದ ಸಾಹಿತ್ಯ ಘಟ್ಟಗಳನ್ನೂ ಗುರುತಿಸಲಾಗಿದೆ. ಈ ಹಿನ್ನೆಲೆಯಿಂದ ಪುರೋಹಿತಶಾಹೀ ಸಾಹಿತ್ಯ, ವ್ಯಕ್ತಿನಿಷ್ಠ ಸಾಹಿತ್ಯ, ಸಮಾಜವಾದೀ ಸಹಿತ್ಯ ಎನ್ನುವ ವರ್ಗೀಕರಣಗಳನ್ನು ಮಾಡಲಾಗಿದೆ.

ಆರ್ಥಿಕ ಸಂರಚನೆಗಳ ವಿಶ್ಲೇಷಣಾತ್ಮಕ ವಿಂಗಡನೆಗೆ ನೇರ ಪ್ರತಿಫಲನವಾಗಿ ವ್ಯವಸ್ಥೆಯಲ್ಲಿನ ಉತ್ಪಾದನಾ ಸಂಬಂಧಗಳೂ ಅವುಗಳನ್ನು ಪ್ರತಿಫಲಿಸುವ ಊರ್ಧ್ವಬಂಧ ರಚನೆಗಳೂ ಇರುತ್ತವೆ ಎನ್ನುವುದು ಇಲ್ಲಿನ ಅಂತಸ್ಥ ಕಲ್ಪನೆಯಾಗಿದೆ.

ಈ ನಿಲುವಿನಿಂದ ಶಿವಾನಂದರು ನವೋದಯ, ನವ್ಯ ಕಾವ್ಯ ಮಾರ್ಗಗಳನ್ನು ವ್ಯಕ್ತಿನಿಷ್ಠ ಬೂರ್ಶ್ವಾ ಸಾಹಿತ್ಯ ಎಂದು ಬದಿಗೊತ್ತರಿಸಿಬಿಡುತ್ತಾರೆ ನವೋದಯ, ನವ್ಯ ಸಾಹಿತ್ಯಗಳಲ್ಲಿ ನಿಹಿತವಾಗಿರುವ ಆದರ್ಶವಾದೀ ತಿಳುವಳಿಕೆಯನ್ನು ಇಂದು ನಾವು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ ಎನ್ನುವ ವ್ಯಾಪಕಾರ್ಥದಲ್ಲಿ ಶಿವಾನಂದರ ನಿಲುವು ಸರಿಯಾದರೂ ಅದು ಅನೇಕ ಚಾರಿತ್ರಿಕ ಸೂಕ್ಷ್ಮಗಳನ್ನು ಗಮನಿಸದಿರುವುದು ಅವರ ಈ ಬದಿಗೊತ್ತರಿಸುವಿಕೆಗೆ ಕಾರಣವಾಗಿದೆ. ಈ ಅರ್ಥದಲ್ಲಿ ಅವರ ನಿಲುವು ತೊಡಕಿನದು. ನವೋದಯ ಸಾಹಿತ್ಯ ನವ್ಯ ಸಾಹಿತ್ಯಗಳನ್ನು ಅವು "ವ್ಯಕ್ತಿ ನಿಷ್ಠ" "ಆದರ್ಶವಾದೀ" ಎನ್ನುವ ಕಾರಣಕ್ಕೆ ಒಂದು ಮಾತಿನಿಂದ ತಿರಸ್ಕರಿಸುವುದು ಸಾಧ್ಯವಲ್ಲ, ಸಾಧುವಲ್ಲ ಅವುಗಳೂ ವಸಾಹತು ವಿರೋಧ, ಬಂಡವಾಳಶಾಹಿ ವಿರೋಧಗಳಲ್ಲಿ ರೂಪು ತಳೆದ ನಿಲುವುಗಳು. ಇಂದು ನಾವು "ಆದರ್ಶ"ವಾದಿಯೆಂದು ಇವುಗಳಿಂದ ಕಡೆದು ಪಡೆದ ಈ ನಿಲುವುಗಳು ನವೋದಯ, ನವ್ಯಗಳಲ್ಲಿ ಒಂದು ಬಗೆಯ ಸಾಂಸ್ಕೃತಿಕ ಅರಿವಾಗಿ, ಮನುಷ್ಯ ಕ್ರಿಯಾಚರಣೆಯಾಗಿ ಹೇಗೆ ರೂಪುಗೊಂಡವು ಎನ್ನುವ ಚರ್ಚೆ ನಮಗೆ ಮುಖ್ಯವಾಗಬೇಕು. ಉದಾಹರಣೆಗೆ, ಕೆಎಸ್‌ನ ಅವರ ಕಾವ್ಯ ಮಧ್ಯಮ ವರ್ಗದ ಕಾವ್ಯವಾಗಿರುವುದು, ಸಾಂಪ್ರದಾಯಿಕವಾಗಿರುವುದು ಮತ್ತು ಕೆಎಸ್‌ನ ಅವರೇ ಬೆಳೆದು ಬಂದ ಕೆಳಮಧ್ಯಮ ವರ್ಗದ ನೋವು ಬವಣೆಗಳಿಗೆ ದನಿ ಕೊಡದಿರುವುದು ಶಿವಾನಂದರ ಅಸಮಾಧಾನಕ್ಕೆ ಕಾರಣವಾಗಿದೆ, ಕೆಎಸ್‌ನ ಅವರ ಕಾವ್ಯವನ್ನು 'ದಿಟದ ದಿಕ್ಕಟ'ಗಳನ್ನು ತೆಕ್ಕೆಗೆ ತಂದುಕೊಳ್ಳುವ ಕಾವ್ಯವೆಂದು ಹೊಗಳುವ ಸಾಹಿತ್ಯ ವಿಮರ್ಶೆಯ ನಿಲುವುಗಳಿಗೆ ಎದುರಾಗಿ, ಟೀಕೆಯಾಗಿ ಶಿವಾನಂದರ ನಿಲುವು ಇದೆ. ಇಂತಹ ಟೀಕೆ—ವಸಾಹತುಶಾಹೀ ವಾಸ್ತವ್ಯದಲ್ಲಿ ತನಗೊಂದು ಸಾಮಾಜಿಕ ಅಸ್ತಿತ್ವವನ್ನು ಕಟ್ಟಿಕೊಳ್ಳಲು ಭಾರತೀಯ ವಿದ್ಯಾವಂತ ವರ್ಗವು ನಡೆಸಿದ ಯತ್ನ, ರಾಷ್ಟ್ರೀಯತೆ ಮತ್ತು ಈ ಆಧುನಿಕ ರಾಷ್ಟ್ರದ ರೂಪುಗೊಳ್ಳುವಿಕೆಯ ಸನ್ನಿವೇಶ, ಆಧುನಿಕತೆಯ ಅಡಿಯಿಡುವಿಕೆ, ವಸಾಹತು ಪ್ರಶ್ನೆಯನ್ನು ಹಾಗೂ ಗುಲಾಮತನದ ಪ್ರಶ್ನೆಗಳನ್ನು ವಿದ್ಯಾವಂತ ವರ್ಗವು ಎದುರಿಸಿದ ರೀತಿ, ಸ್ವಯಂ ತಂತ್ರವಾದೀ/ಬ್ರಾಹ್ಮಣ್ಯದ ನಿಲುವುಗಳೇ ಆಗಿರಲಿ ನವೋದಯದ ನಿಲುವುಗಳು ವಸಾಹತು ವಿರೋಧೀ ನಿಲುವುಗಳಾಗಿ ತಲೆಯೆತ್ತಿದ ಬಗೆ, ಆಧುನಿಕತೆಯ ಬೆಳವಣಿಗೆಯೊಡನೆ ಪರಂಪರೆ, ಜಾನಪದ ಲೋಕಗಳನ್ನು ಗ್ರಹಿಸಿ ಸಾಹಿತ್ಯದಲ್ಲಿ ಮರುಬರೆದ ಕ್ರಮ, ಲೋಕ ವೈರುಧ್ಯಗಳನ್ನು ದಾಟುವ ಉಪಾಯವಾಗಿ ಪ್ರೇಮ

ಈ ಸಾಹಿತ್ಯದಲ್ಲಿ ಮುನ್ನೆಲೆಗೆ ಬರುವ ರೀತಿ-ಈ ಒಟ್ಟು ಸಾಂಸ್ಕೃತಿಕ ರಾಜಕಾರಣದ ಎಳೆಯಾಗಿ ನವೋದಯ ಕಾವ್ಯ ಮಾರ್ಗ, ಕೆಎಸ್‌ನ ಅವರ ಕಾವ್ಯಗಳನ್ನು ಗುರುತಿಸಿಕೊಂಡಾಗ ಮಾತ್ರ ಅರ್ಥಪೂರ್ಣವಾಗುತ್ತದೆ. ನವ್ಯ ಸಾಹಿತ್ಯ ಕೂಡಾ ಅಧಿಕಾರ ಕೇಂದ್ರೀಕರಣ, ಬಳಕೆದಾರ ಸಂಸ್ಕೃತಿ, ಬಂಡವಾಳಶಾಹೀ ವಿರೋಧದಲ್ಲಿಯೇ ರೂಪುಗೊಳ್ಳುತ್ತದೆ. ಅದು ಆಧುನಿಕತೆಯ ಸಹಜಾತ ಮತ್ತು ಪರಮ ಶತ್ರು. ಈ ವಿರೋಧದ ರೂಪೀಕರಣದ ಚಾರಿತ್ರಿಕತೆಯನ್ನು ಇಂತಹ ಟೀಕೆ ಗಮನಿಸುವುದಿಲ್ಲ. ಸಾಹಿತ್ಯವನ್ನು ಒಂದು ಸಂಪಹನ. ಸಾಂಸ್ಕೃತಿಕ ಕ್ರಿಯಾಚರಣೆ ಎಂದು ಗುರುತಿಸಿಕೊಂಡರೆ ನವೋದಯ/ನವ್ಯ ಮಾರ್ಗಗಳನ್ನು ಪ್ರತಿಗಾಮಿ ನಿಲುವಿನವು ಎಂದು ಗುರುತಿಸಿಯೂ ತಳ್ಳಿ ಹಾಕದಿರಲು ಸಾಧ್ಯವಾಗುತ್ತದೆ, ಅವುಗಳ ಮೂಲಕ ಪ್ರತೀತವಾಗುವ ಸಾಮಾಜಿಕ ನಿಜಗಳ ವಿಶ್ಲೇಷಣೆ ಸಾಧ್ಯವಾಗುತ್ತದೆ. ಅರ್ಥಪೂರ್ಣವೆನ್ನಿಸುತ್ತದೆ. ಅಂದರೆ, ಸಾಹಿತ್ಯ ಒಂದು ಸಾಂಸ್ಕೃತಿಕ ರೂಪವಾಗಿ ರೂಪೀಕರಣಗೊಂಡು ಉತ್ಪಾದಿತವಾಗುವ ಪ್ರಕ್ರಿಯೆಯನ್ನು ಕುರಿತ ಚರ್ಚೆ ಮುಖ್ಯವಾಗಬೇಕು. ಎರಡನೆಯದಾಗಿ, ಸಾಹಿತ್ಯ ರೂಪುಗೊಳ್ಳುವುದು. ಒಂದು ಬಗೆಯ ಸಾಂಸ್ಕೃತಿಕ ತಿಳುವಳಿಕೆಯಿಂದ. ಈ ತಿಳುವಳಿಕೆಯಾಗಲೀ, ಸಾಹಿತ್ಯದಲ್ಲಿ ಕಂಡು ಬರುವ ಸಾಂಸ್ಕೃತಿಕ ಅರಿವಾಗಲೀ ಸಂಪೂರ್ಣ ತರ್ಕಬದ್ಧವಾಗಿರುವುದು ಸಾಧ್ಯವಿಲ್ಲ. ಅದು ಒಂದು ಥಿಯರಿ ಅಲ್ಲ ಅಷ್ಟೇನೂ ತರ್ಕಬದ್ಧವಲ್ಲದ ಸಾಂಸ್ಕೃತಿಕ ತಿಳುವಳಿಕೆ ಕೇಂದ್ರವಾಗಿ ಉಳ್ಳ ಸಾಹಿತ್ಯ ವಿರುದ್ಧಾರ್ಥಗಳು, ಶೈಲಿಗಳು , ತಾಕಲಾಟ, ಸಂಘರ್ಷಗಳೆಲ್ಲವನ್ನೂ ಒಳಗೊಂಡಿರುವ ಜಾಳು ಜಾಳಾದ ಬರವಣಿಗೆಯನ್ನು ಸಾಧ್ಯ ಮಾಡುತ್ತದೆ. ಕೃತಿಯಲ್ಲಿ ಹೇಳಿರುವ ಮಾತಿನಷ್ಟೇ ಹೇಳದೇ ಬಿಟ್ಟ ಮೌನವೂ ಮುಖ್ಯ. ಐಡಿಯಾಲಜಿಯು ಹೇಳಬಾರದೆಂದು ನಿರ್ಬಂಧ ಪಡಿಸುವ ವಿಷಯಗಳು ಕೃತಿಯು ತಾಳುವ ಮೌನಕ್ಕೆ, ಬಿಡುವ ತೆರಪುಗಳಿಗೆ ಹಾಗೂ ವಿರುದ್ಧಾರ್ಥಗಳಿಗೆ ಕಾರಣವಾಗುತ್ತದೆ. ಹೀಗೆ ಸಾಂಸ್ಕೃತಿಕ ರೂಪವಾದ ಸಾಹಿತ್ಯ ನೂರಕ್ಕೆ ನೂರು ತರ್ಕಬದ್ಧವಲ್ಲ. ಅದು ಜಾಳು ಜಾಳು ಹಾಗೂ ವಿಕೇಂದ್ರೀಕೃತ. ಮೂರನೆಯದಾಗಿ. ಸಾಹಿತ್ಯದಲ್ಲಿ ಲೇಖಕನೊಬ್ಬನದೇ ದನಿ ಓತಪ್ರೋತವಾಗಿ ಹರಿದಿರುವುದಿಲ್ಲ. ಅದು ಅನೇಕ ದನಿಗಳಿಂದ ಕೂಡಿರುತ್ತದೆ. ಆದುದರಿಂದ ನೂರಕ್ಕೆ ನೂರು ಪ್ರಗತಿಪರ ಕಲೆ, ಪ್ರತಿಗಾಮಿ ಕಲೆ ಎನ್ನುವ ವಿಂಗಡಣೆ ಮಾಡುವುದು ಸಾಧ್ಯವಿಲ್ಲ. ಒಂದು ಬರವಣಿಗೆಯ ಕ್ರಿಯಾಚರಣೆಯ ಮೂಲಕ ಲಭ್ಯಗೊಳ್ಳುವ ಚಾರಿತ್ರಿಕ, ಸಾಂಸ್ಕೃತಿಕ ಸನ್ನಿವೇಶದ ವಿಶ್ಲೇಷಣೆ ಮಾತ್ರ ಮಹತ್ವದ ಒಳನೋಟಗಳನ್ನು ನೀಡಬಲ್ಲದು. ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವವು ನೇರವಾಗಿ ಪ್ರತಿಫಲಿತವಾಗುತ್ತದೆ ಎನ್ನುವ ನಿಲುವನ್ನು ಎಡ ಪಂಥೀಯ ವಿಮರ್ಶೆ ಕರೇ ದಾಟಿ ಮುಂದೆ ಹೋಗಿದ್ದಾರೆ.

ಒಟ್ಟಿನಲ್ಲಿ, ಶಿವಾನಂದರ ಕೃತಿ ಮತ್ತು ಅದರ ಹಿನ್ನೆಲೆಯಲ್ಲಿ ಬಂಡಾಯ ಚಳುವಳಿಗಳು ಆರಂಭಿಸಿದ ಸಾಹಿತ್ಯಕ ವಾಗ್ವಾದಗಳು ಕನ್ನಡದಲ್ಲಿ ಮುಖ್ಯವಾದುದಾಗಿವೆ. ಕನ್ನಡದ ಸಾಂಸ್ಕೃತಿಕ ಚರಿತ್ರೆಯಲ್ಲಿ ಅವು ಎತ್ತಿರುವ ಪ್ರಶ್ನೆಗಳನ್ನು ನಿರಾಕರಿಸಿ ಮುಂದುವರಿಯುವುದು ಸಾಧ್ಯವಿಲ್ಲ. ಸಾಹಿತ್ಯಕ್ಕೆ ಸಂಬಂಧಿತವಾಗಿ ಶಿವಾನಂದರು ಎತ್ತಿರುವ ವರ್ಗ ವಿಶ್ಲೇಷಣೆಯ ಮಾತುಗಳು ಮುಖ್ಯವಾದವುಗಳು. ಸಾಹಿತ್ಯವನ್ನು ಸುತ್ತುವರಿದಿದ್ದ ನಿಗೂಢತೆಯ ಮತ್ತು ಪ್ರತಿಭೆಯ ಪ್ರಭಾವಲಯವನ್ನು ಶಿವಾನಂದರು ಬಯಲುಮಾಡಿದ್ದಾರೆ. ಸಾಹಿತ್ಯ ಕೇವಲ ಸೌಂದರ್ಯ ಶಾಸ್ತ್ರೀಯ ಕಾಳಜಿಯ ವಸ್ತುವಾಗುವುದನ್ನು ತಪ್ಪಿಸಿ, ಸಾಹಿತ್ಯದ ವಿವೇಚನೆ ಒಟ್ಟೂ ಸಮಾಜದ, ಸಂಸ್ಕೃತಿಯ ವಿವೇಚನೆಯಾಗುವ ಕಡೆಗೆ ಅವರು ಪ್ರಯತ್ನಿಸಿದ್ದಾರೆ. ಕನ್ನಡದಲ್ಲಿ ಇಂತಹ ಯತ್ನಗಳು ಆಧುನಿಕ ಸಾಹಿತ್ಯ ವಿಮರ್ಶೆಯಲ್ಲಿ ಬದಿಗೊತ್ತರಿಸಲಾಗಿದ್ದ ಅನೇಕ ಪ್ರಶ್ನೆಗಳನ್ನು ಮುನ್ನೆಲೆಗೆ ತಂದಿವೆ. ಅನ್ಯಾನ್ಯ ಸಾಮಾಜಿಕ ವರ್ಗಗಳ ಆತ್ಮ ವಿಶ್ವಾಸಕ್ಕೆ ಕೂಡಾ ಬಂಡಾಯದ ಯತ್ನಗಳು ಕಾರಣವಾಗಿವೆ. ಒಟ್ಟಾಗಿ ಎಡಪಂಥೀಯವೆಂದು ಕರೆಯಬಹುದಾದ ಈ ನಿಲುವುಗಳು ಹೆಚ್ಚು ಗಹನವೂ, ಸೂಕ್ಷ್ಮವೂ, ಚಿಂತನಾಪರವೂ ಆದ ಬರವಣಿಗೆಗಳಿಗೆ, ಎಡ ಮತ್ತು ಎಡವಲ್ಲದ ಸಾಂಸ್ಕೃತಿಕ/ಸಾಮಾಜಿಕ ವಿಚಾರಗಳ ಸಮಗ್ರ ಇತಿಹಾಸವನ್ನು ಗಮನಿಸುವಂತಹ ಬರವಣಿಗೆಗಳಿಗೆ ಕಾರಣವಾಗಬೇಕು. ಈ ಕಾರಣದಿಂದ ಬಂಡಾಯ ಆರಂಭವಾದಾಗಿನ ಅದರ ನಿಲುವುಗಳಿಗೆ ಇಂದೂ ಅಂಟಿಕೊಂಡಿರುವುದು ಕಷ್ಟ ಮತ್ತು ಸರಿಯಲ್ಲ. ಅನ್ಯಾನ್ಯ ಎಡಪಂಥೀಯ ಬರಹಗಾರರ ಸಾಂಸ್ಕೃತಿಕ ಚಿಂತನೆಗಳನ್ನು, ಎಡಪಂಥೀಯ ಚಿಂತನೆಯ ಬೌದ್ಧಿಕ ಚರಿತ್ರೆಯನ್ನು ಪರಿಗಣಿಸುವುದು ಈ ನಿಟ್ಟಿನಲ್ಲಿ ಮೊದಲ ಹೆಜ್ಜೆ. ●

## ಬಿ. ಟಿ. ಲಲಿತಾ ನಾಯಕ

# ಕದನದ ಕಥೆ

ಹುಟ್ಟುವ ಮೊಮ್ಮಗುವಿಗೊಂದು
ಕಥೆ ಹೇಳಬಹುದು--
ನನ್ನ ಕಾಲದಲೊಂದು ಕದನ
ಎದುರಿಸಿದೆನೆಂದು.

'ಸಿಡಿ ಮದ್ದಿನ ಸದ್ದಿನಲಿ
ಸದ್ದಾಂನ ಜಿದ್ದಿನಲಿ
ಬುಶ್‌ನ ಒಣ ದರ್ಪದಲಿ
ಜಗವು ಕುದಿಯುತೊಡಗಿತು
ಭೀತಿ ಬಲಿಯುತೊಡಗಿತು
ಪರಿಸರದ ಒಡಲಲ್ಲಿ
ಕಿಚ್ಚು ಹೊತ್ತಿ ಉರಿಯಿತು!"
ಎಂದೆಲ್ಲಾ ನಾನೇ ಬರೆದ
ಕವಿತೆಯೊಂದ ಓದಿ ಹೇಳಬಹುದು.
ಸಾಗರದ ಜೀವ ಸಂಕುಲವು
ತೈಲ ಮಿಶ್ರಣ ಕುಡಿದು
ಧಡಪಡಿಸಿ ಸತ್ತ ಸಂಗತಿಯನ್ನು
ಅಂತರಿಕ್ಷದ ದಾಳಿ ಮೈ ತುಂಬ ರಣಗಾಯ
ಚೆಲುವೆ ಅರಬಸ್ಥಾನಿ ಕುರೂಪಗೊಂಡಿದ್ದನ್ನು
ಮಾತಾ-ಪಿತರು ಮಕ್ಕಳ ಗೋರಿಗಿಟ್ಟಿದ್ದನ್ನು
ಅನಾಥ ಕಂದಮ್ಮಗಳ
ಅರಣ್ಯರೋದನದ ವ್ಯಥೆಯನ್ನು ...
ಹೀಗೆ ಕಥೆ ಮುಂದುವರೆಸಬಹುದು ...
'ನ್ಯಾಯ ನ್ಯಾಯ'ವೆಂದೊದರಿದವನ
ಕುರ್ಚಿ ಕೆಡವಿದ ಕಥೆ
'ವಂಶ ಕುಲ ತಿಲಕ'ನ
ಪಟ್ಟಾಭಿಷೇಕದ ಕಥೆ
ಪರದೇಶದ ಬೀಬಿ ಬೇಗಂ ಗಳ
ಅಪಹರಣದ ಕಥೆ
ಜೊತೆಗೆ ಅಯೋಧ್ಯೆಯ ರಾಮರಥದ ಕಥೆ

ಮಸೀದಿ ನಡುಗಿ ಕಡಿದುರುಳಲ್ಪಟ್ಟ
ಕಥೆಯನ್ನಷ್ಟು ಆರುಹಬಹುದು.

ಆಗ,
ನನ್ನ ಪಾತ್ರವ ಕುರಿತು
ಮೂಡಿ ಬಂದರೆ ಪ್ರಶ್ನೆ–
'ಪ್ರತಿಭಟನೆ ಮೆರವಣಿಗೆ ಘೋಷಣೆಯು ಧಿಕ್ಕಾರ
ದಿಕ್ಕು ದಿಕ್ಕಿಗೂ ವ್ಯರ್ಥ ಧ್ವನಿಸಿದ್ದಷ್ಟೇ'
ಎಂದುತ್ತರಿಸಬಹುದು.
ಅಷ್ಟೇ
ನಾನೊಂದು ಕಥೆ ಹೇಳಬಹುದು
ಇಲ್ಲವೇ ಕವಿತೆ ಓದಬಹುದು ...

ಎಚ್. ನಾಗರಾಜಪ್ಪ

---

## ಕ್ಯಾಲಿಬಾನನ* ಸ್ವಗತ

೧

ಈ ಮಣ್ಣ ಮೂಲದವನು ನಾನು
ಈ ನೆಲ ಈ ಜಲ
ಈ ಗಾಳಿ ಈ ಬೆಳಕು
ಮೊಳೆಯಿಸಿದ ಜೀವ

ಹೆಮ್ಮರದ ಜತೆಜತೆಗೆ ಹೆಣಕೊಂಡ ಬಳ್ಳಿಗಳು
ಕಗ್ಗಾಡ ನಡುನಡುವೆ
ಕಾಡೆಮ್ಮೆ ಕಿರುಬ ಹುಲಿ ಆನೆ ಹಿಂಡು
ಮೊಲ ಜಿಂಕೆ ಗಿಳಿ ನವಿಲು ಸಾಲು ಸಾಲು
ಎಲ್ಲವುಗಳೊಡನಾಟ ಮೈತ್ರಿಯಾಟ
ಹೆಜ್ಜೆಹೆಜ್ಜೆಗೆ ಅಗೆದರೆ ಗೆಡ್ಡೆಗೆಣಸು
ಎತ್ತರಕೆ ಮರ ಏರಿದರೆ ಹಣ್ಣು ಹೆಜ್ಜೇನು ಹುಟ್ಟು
ನೀರಡಿಕೆಗೆ ತಿಳಿಗೊಳ ನಿದ್ದೆಗೆ ಹೊಂಗೆನೆರಳು
ಹಕ್ಕಿ ಹಾಡಿನ ಸುಳಿಗಾಳಿಗೆ ಸವಿಗನಸು ಸುಗ್ಗಿ!
ನನ್ನವ್ವ ನನಗಾಗಿ ಬಿಟ್ಟುಹೋದ

---

* ಶೇಕ್ಸ್‌ಪಿಯರನ 'ದ ಟೆಂಪೆಸ್ಟ್' ನಾಟಕದ ಒಂದು ಪಾತ್ರ

ಈ ಪುಟ್ಟ ದ್ವೀಪದ ತುಂಬ ಸಗ್ಗದ ಹಿಗ್ಗು !
ಎಲ್ಲಿ ಹೋದವು ಆ ದಿನಗಳು !?

೨

ಎಲ್ಲಿಂದ ಇಳಿದನೊ ಮಾಯಾವಿ ಪ್ರಾಸ್ಪೆರೊ
ಮುದ್ದಿನ ಮಗಳು ಮಿರಾಂಡ ಜತೆ
ಬಿಳಿಚಿದ ಮೈಯ್ಯಿ ಕೊಕ್ಕು ಮೂಗು
ಉದ್ದಾನೆ ಉದ್ದ ಬೇತಾಳ
ಕೊಂದ ನನ್ನ
ಕನಸಿನ ಸುಗ್ಗಿಯ ಕೊಳ್ಳೆ ಹೊಡೆದ
ಈ ನೆಲದ ತುಂಬ ಕಾರುಬಾರು ನಡೆಸಿದ

ಮಾಯಾವಿ ಮುದುಕ
ಮಂತ್ರದಂಡ ಹಿಡಿದು ಥಳಥಳಿಸುತಾನೆ
ಬಾಗು ಅಂತಾನೆ ತೆವಳು ಅಂತಾನೆ
ಹೇಳಿದ ಚಾಕರಿ ಮುಗಿಸು ಅಂತಾನೆ
ಏನು ಸೊಕ್ಕು ಎಂಥ ಠಕ್ಕು!
ಮಾತ ಕಲಿಸುತೀನಿ ಅಂತಾನೆ
ನಾಲಿಗೆಮಾತು ಬರೀ ಮಾತು ಮಾತುಮಾತು
ಅವನಿಗಾಗಿ ಬಾಗಿದೆ ಬೆವರು ಬಸಿದೆ
ಸಿಟ್ಟಿಗೆ ಮುಲಾಜಿಲ್ಲದೆ ನಾಲಗೆ ಬಳಸಿದೆ
ಮಂತ್ರದಂಡದ ಎದುರು ಮುದುಡಿ ತೆಪ್ಪಗಾದೆ

೩

ಇಲ್ಲ ಅವನಿಲ್ಲ ಈಗ
ಈ ನೆಲವ ಖಾಲಿಮಾಡಿಯಾಗಿದೆ
ಆದರೂ
ಅವನು ಒಗ್ಗಿಸಿಹೋದ ಬಗ್ಗುವಿಕೆ
ಕಲಿಸಿಹೋದ ಒಣಮಾತು
ಹಾಗೇ ಉಳಿದಿವೆ...
ಒಂದಲ್ಲ ಒಂದಿನ
ಎದ್ದು ನಡೆದಾಡುವೆ
ಎದೆಯಾಳದಿಂದ ಮಾತಾಡುವೆ!

## ವಿ. ಆಂಜನೇಯ

# ಕತ್ತಲ ಹುಡುಗಿಯ ಬೆತ್ತಲೆ ಹಾಡು

ನನ್ನೊಬ್ಬಳು ಗೆಳತಿ
ಕತ್ತಲಿನ ಒಡತಿ !

ಕತ್ತಲಲಿ ಬೆಳಕನ್ನು ಹುಡುಕಿ
ಬೆಳಕಿನಲಿ ಕತ್ತಲಿಗಾಗಿ ಅಲೆದು
ಕಾಡಿನಲಿ ಗದ್ದಲ ಬಯಸಿ
ಕನವರಿಸುತ್ತಿದ್ದಾಳೆ ಹಗಲಿರುಳು.

ಜಾತ್ರೆಯಲ್ಲಿ ಜನರೊಂದಿಗೆ ಸೇರಿ
ಸಾಗರದಲಿ ಚುಕ್ಕಿಗಳ ಎಣಿಸಲು
ಬಾನಿನಲಿ ತಾವರೆಗಳ ಗುರುತಿಸಲು
ತಡಕಾಡುತ್ತಿದ್ದಾಳೆ ಸಂಜೆಗತ್ತಲಲ್ಲಿ.

ಈಚಲ ಮರದಡಿಯಲಿ ನಿಂತು
ಹೊಂಗೆ ನೆರಳ ಕನಸು ಕಾಣುತ್ತಾಳೆ
ಪಾಪಾಸ್ ಕಳ್ಳಿಯ ಹತ್ತಿರ ಕುಂತು
ಕೆಂಪು ದಾಸವಾಳದ ಬಗ್ಗೆ ಯೋಚಿಸುತ್ತಾಳೆ.

ಬೇಲಿ ಹೂಗಳ ಕಥೆ ಗೀಚಿ
ಜಾಲಿ ಮುಳ್ಳುಗಳ ಕವಿತೆ ರಚಿಸಿ
ಪಾರ್ಥೇನಿಯಂ ಗಿಡದ ಕಾದಂಬರಿ ಬರೆದು
ಕತ್ತಾಳೆ ಹಾಡಿಗಾಗಿ ಮರಗುತ್ತಾಳೆ.

ಬೆಳದಿಂಗಳಲಿ ಬೆತ್ತಲಾಗಿ ಬಿಕ್ಕುತ್ತ
ಕಾಡು ಮಲ್ಲಿಗೆಯ ಪಾಡಿಗಾಗಿ ಕೊರಗುತ್ತ
ಚಕೋರ ಪಕ್ಷಿಯ ಉನ್ಮಾದಕ್ಕೆ ತಪಿಸುತ್ತ
ಕಾಯುತ್ತಿದ್ದಾಳೆ ಬರುವ ಕತ್ತಲ ಪಕ್ಷಕ್ಕಾಗಿ.

# 'ಅಕ್ಕನ ವಚನ : ಹೊಳೆದ ಅರ್ಥ'

೧

ಸಂಕ್ರಮಣ (ಜುಲೈ, ಆಗಸ್ಟ್ ೧೯೬೩) ಪತ್ರಿಕೆಯಲ್ಲಿ, ಓ. ಎಲ್. ನಾಗಭೂಷಣ ಸ್ವಾಮಿಯವರು "ಅಕ್ಕನ ವಚನ : ಹೊಳೆದ ಅರ್ಥ" ಎಂಬ ಒಂದು ಲೇಖನದಲ್ಲಿ, ಅಕ್ಕನ ಒಂದು ವಚನವನ್ನು ಕೊಟ್ಟು ಅದರ ಅರ್ಥವನ್ನು ಈ ಕೆಳಗಿನಂತೆ ಅರ್ಥೈಸಿ ಸಿರುತ್ತಾರೆ.

೧. ಚೆನ್ನಮಲ್ಲಿಕಾರ್ಜುನನನ್ನು ನಾನು ಕಂಡಿದ್ದೇನೆ, ನೀವು ಕಂಡಿಲ್ಲವೇ ಎಂಬ ಆಶ್ಚರ್ಯಭರಿತ ಪ್ರಶ್ನೆ ಇಲ್ಲಿದೆ.

೨. ಚೆನ್ನಮಲ್ಲಿಕಾರ್ಜುನನನ್ನ ನಾನು ಕಂಡಿದ್ದೇನೆ, ನೀವೂ ಕಾಣಿರಿ ಎಂಬ ಒಲವಿನ ಒತ್ತಾಯ ಅಥವಾ ಆದೇಶ. ವಚನದ ನೀವು ಎಂಬ ಪದವನ್ನು ಉಚ್ಚರಿಸುವ ರೀತಿಯಲ್ಲಿ ಈ ಅರ್ಥಗಳು ಮೂಡಬಹುದು.

೩. ಚೆನ್ನಮಲ್ಲಿಕಾರ್ಜುನ ಬೇರೆಯಾರೂ ಅಲ್ಲ, ದೂರ ಎಲ್ಲೋ ಇಲ್ಲ, ನೀವೇ, ನೀವೆಲ್ಲರೂ ಚೆನ್ನಮಲ್ಲಿಕಾರ್ಜುನನೇ ಆಗಿದ್ದೀರಿ. ಈಗಲೂ ಅಷ್ಟೆ ನೀವು ಎಂಬ ಪದಕ್ಕೆ ನಾವು ಕೊಡುವ ಒತ್ತಿನ ರೀತಿ ಇಂಥ ಅರ್ಥವನ್ನು ಮೂಡಿಸ ಬಲ್ಲದು. "ವನವೆಲ್ಲ ನೀವೆ" ಎಂಬ ವಚನ ನೆನಪಿಗೆ ಬಂದಿತು.

ಇಷ್ಟು ಅರ್ಥಗಳು ತಮಗೆ ಹೊಳೆದವುಗಳೆಂದು ಹೇಳಿ, ಮುಂದೆ "ಅರ್ಥ"ದ ಬಗ್ಗೆ ಒಂದು ಚಿಕ್ಕ ವ್ಯಾಖ್ಯೆ (ಡೆಫಿನಿಷನ್) ಸಹ ಕೊಟ್ಟಿರುತ್ತಾರೆ– "ಅರ್ಥವೆಂಬುದು ಆಗುವ ಅನುಭವವೇ ಹೊರತು ಇರುವ ಸಂಗತಿಯಲ್ಲ ಓದುವಾಗ ನಾವು ಸ್ವಲ್ಪ ಸ್ವಾತಂತ್ರ್ಯವನ್ನು ವಹಿಸಿದರೆ ಓದಿಗೆ ಹೊಸತನದ ಮೆರುಗು ಬರುತ್ತದೆ. ಖಚಿತ ವಾದ ಅರ್ಥವನ್ನು ಹಿಡಿಯಬೇಕು, ಅದನ್ನೇ ಸಾಧಿಸಿ ಎಲ್ಲರನ್ನೂ ಒಪ್ಪಿಸಬೇಕು ಎಂಬ ಹಟ ಇಲ್ಲದಿದ್ದರೆ ಓದುವುದು ಕೂಡ ಸ್ವಾತಂತ್ರ್ಯದ ಕ್ರಿಯೆಯಾಗುತ್ತದೆ. ಮನಸ್ಸಿಗೆ ಬಿಡುಗಡೆ ತರುತ್ತದೆ."

ಮೇಲಿನ ಈ ಮಾತುಗಳನ್ನು ಗಮನದಲ್ಲಿಟ್ಟುಕೊಂಡು, ಹಾಗೆಯೇ ವಚನದ ಸಂಪಾದಕರ ಮಾತುಗಳನ್ನೂ ಮತ್ತು ಈ ಲೇಖನದ ಲೇಖಕರ ಮಾತುಗಳನ್ನೂ ಹಾಗೂ ಬೇರೆ ವಿಮರ್ಶಕರ ಮಾತುಗಳನ್ನೂ ಹೋಲಿಸಿ ನೋಡಿ ಸರಿಯಾದ ಅರ್ಥವನ್ನು ಹುಡುಕುವುದಕ್ಕಿಂತ, ಅದರ ನೈಜ ಅರ್ಥವನ್ನು ಉಳಿಸಿಕೊಳ್ಳುವುದೇ ಲೇಸು.

ನೀವು ಕಾಣಿರೇ ? ನೀವು ಕಾಣಿರೇ ? ಎಂಬ ಶಬ್ದದ ಅರ್ಥ ಹಾಗಾದರೆ ಕಂಡ ಹಾಗೆ ಆಗುತ್ತದೆಯೋ ? ಇದೇ ಅರ್ಥ ವಚನಗಾರ್ತಿಯದಾಗಿದ್ದರೆ, ಕೊನೆಯ ಸಾಲಿನಲ್ಲೇಕೆ ಹೀಗೆ ಹೇಳಬೇಕಾಗಿತ್ತು ? ಚೆನ್ನಮಲ್ಲಿಕಾರ್ಜುನ ದೇವನೆಲ್ಲಿದ್ದಾನೆಂಬುದರ ಬಲ್ಲಡೆ ನೀವು ಹೇಳಿರೆ ? ಪುನಃ ಆ ಪಕ್ಷಿ ಕುಲವನ್ನೆಲ್ಲಾ ಕುರಿತು ಕೇಳುವ ಅವಶ್ಯಕತೆಯಾದರೂ ಏನಿತ್ತು ? ಹೀಗೆ ಪ್ರತಿಯೊಬ್ಬರೂ ಒಂದೊಂದು ರೀತಿಯಲ್ಲಿ ವಚನಗಳಿಗೆಲ್ಲಾ ತಮಗೆ ಹೊಳೆದ ಅರ್ಥಗಳನ್ನು ಹೇಳುತ್ತಾ ಹೋದರೆ, ಅವುಗಳೆಲ್ಲವುಗಳ ವಿಮರ್ಶೆ ಪುನಃ ಹೊಸದಾಗಿ ಆಗಬೇಕಾಗುತ್ತದೆ. ಜೊತೆಗೆ ಎಷ್ಟೋ ವಚನಕಾರರ ವಿಚಾರಗಳಿಗೆ ವಿರುದ್ಧವಾದ ಭಾವನೆಗಳೆಲ್ಲವನ್ನೂ 'ಹೊಳೆದ ಅರ್ಥ' ವೆಂದು ಬರೆದು, ಮೂಲಾರ್ಥಕ್ಕೆ ಅಪಚಾರವೆಸಗಿದಂತಾಗುವುದಿಲ್ಲವೆ ?

'ನೀವು' ಎಂಬ ಪದಕ್ಕೆ ನಾವು ಕೊಡುವ ಒತ್ತಿನ ರೀತಿ ಇಂಥ ಅರ್ಥವನ್ನು ಮೂಡಿಸಬಲ್ಲದು. "ವನವೆಲ್ಲ ನೀವೆ" ಎಂಬ ವಚನ ನೆನಪಿಗೆ ಬಂದಿತು—ಎಂದು ಬರೆದಿರುತ್ತಾರೆ. ಇಲ್ಲಿಯೂ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನನ್ನು ಕಂಡಿದ್ದೇನೆಂಬುದಾಗಿ ಎಲ್ಲಿಯೂ ಹೇಳಿಲ್ಲ. "ವನವೆಲ್ಲ ನೀವೆ/ವನದೊಳಗಣ ದೇವತರುವೆಲ್ಲ ನೀವೆ/ಕರುವಿನೊಳಗಾಡುವ ಖಗಮೃಗವೆಲ್ಲ ನೀವೆ/ಚೆನ್ನಮಲ್ಲಿಕಾರ್ಜುನನ, ಸರ್ವಭರಿತನಾಗಿ/ಎನಗೇಕೆ ಮುಖದೋರೆ ?'' ಈ ಕೊನೆಯ ಪಾದದ ಅರ್ಥವನ್ನು ಸ್ವಾಮಿಯವರು ಕಂಡಿದ್ದಾಗಿ ತಿಳಿದುಕೊಂಡರೆ ಹೇಗೆ ? ಜಗತ್ತೆಲ್ಲವೂ ಚೆನ್ನಮಲ್ಲಿಕಾರ್ಜುನನೇ ಆಗಿದ್ದಾನೆ ಎಂಬ ಕಲ್ಪಿತ ಮನೋಭಾವ ಇಲ್ಲಿದೆಯೇ ಹೊರತು, ಚೆನ್ನಮಲ್ಲಿಕಾರ್ಜುನನನ್ನು ಕಂಡಿದ್ದೇನೆ ಎಂಬ ಅರ್ಥ ಇಲ್ಲೆಲ್ಲಿಯೂ ವ್ಯಕ್ತವಾಗುವುದಿಲ್ಲ. ಆದ್ದರಿಂದ 'ನೀವು' ಎಂಬ ಪದಕ್ಕೆ ಈ ರೀತಿ ಅರ್ಥೈಸುವುದು ಸರಿ ಕಾಣುವುದಿಲ್ಲ.

ಯಾರೇ ಆಗಲಿ ಹೊಸದಾಗಿ ಹೊಳೆದಂಥ ಅರ್ಥಗಳನ್ನು ಹೇಳುವಾಗ ಹಳೆಯ ಅರ್ಥಕ್ಕೆ ಸಂಪೂರ್ಣ ತದ್ವಿರುದ್ಧವಾದ ಅರ್ಥವನ್ನು ಹೇಳಿ, 'ಅದು ಅನುಭವವೇ ಹೊರತು ಇರುವ ಸಂಗತಿಯಲ್ಲ' ಎಂದು ವ್ಯಾಖ್ಯೆ ಮಾಡುವುದು ಅಷ್ಟೊಂದು ಸರಿಯಾದ ಕ್ರಮವಲ್ಲವೆಂದೇ ಹೇಳಬೇಕಾಗುತ್ತದೆ. ಯಾವ ಶರಣರೂ ದೇವರನ್ನು ಕಂಡಿದ್ದೇವೆಂದು ಎಲ್ಲಿಯೂ ಹೇಳಿಲ್ಲ. ದೇವರಿಗೆ ಆಕಾರವನ್ನು ಕೊಟ್ಟವರೂ ಅವರಲ್ಲವಾದ್ದರಿಂದ ಈ ರೀತಿ ಹೊಳೆದ ಅರ್ಥಗಳನ್ನು ಪತ್ರಿಕೆಗಳಲ್ಲಿ ಬರೆದು, ವಿವಾದ ಸೃಷ್ಟಿಸುವುದು ಸರಿಯಲ್ಲವೆಂಬುದನ್ನು ಅನಿವಾರ್ಯವಾಗಿ ಹೇಳಬೇಕಾಗುತ್ತದೆ.

**ಎಂ. ಈಶ್ವರಶರ್ಮ**
**ಸಿರಿಗೆರೆ**

೨

"ಅಕ್ಕನ ವಚನ : ಹೊಳೆದ ಅರ್ಥ" — ಎಂಬ ಲೇಖನ ಕುರಿತು ಒಂದೆರಡು ಮಾತು :

'ಅರ್ಥವೆಂಬುದು ಆಗುವ ಅನುಭವವೇ ಹೊರತು ಇರುವ ಸಂಗತಿಯಲ್ಲ' — ಎಂದಾದರೆ ಯಾವ ಓದಿಗೂ 'ನಿರ್ದಿಷ್ಟ' ಅರ್ಥ ಇರಲಾರದು ಎಂದೆ ? ಹಾಗಾದರೆ 'ಯಥಾರ್ಥ' 'ಅಯಥಾರ್ಥ' ಹೇಳಿಕೆಗಳಲ್ಲಿ ವ್ಯತ್ಯಾಸ ಉಳಿಯುವದೆ ? ಖಚಿತವಾದ ಅರ್ಥ ಹಿಡಿಯುವ ಪ್ರಯತ್ನ ಹಾಗೂ ಅದು ಖಚಿತವೆಂದು ಒಪ್ಪಿಸುವ ಪ್ರಯತ್ನಗಳಲ್ಲಿ ವ್ಯರ್ಥ ಪ್ರಯಾಸಗಳೆ ? ಬೇಕಾದಂತೆ ಅರ್ಥ ಮಾಡುತ್ತ ಹೋಗುವುದೇ ಸ್ವತಂತ್ರ ಓದುವ ಕ್ರಿಯೆಯಾದರೆ, ಪಾಠ ನಿರ್ಧಾರ – ಅರ್ಥ ನಿರ್ಣಯ – ಸತ್ಯ ಶೋಧನೆಗಳಂಥ ಸಂಶೋಧನ ಪ್ರಯಾಸಗಳು ಅರ್ಥಹೀನವೇ ? 'ಬಲ್ಲಡೆ ಎಲ್ಲಿದ್ದಾನೆಂಬುದು ನೀವು ಹೇಳಿರೆ' — ಎಂಬುದನ್ನು ಸ್ವತಂತ್ರವಾಗಿ ಓದುವುದು ಹೇಗೆ ? ವಿದ್ವಾಂಸರು ಬರೆದ ಲೇಖನಗಳುಂಟೆಂದು ನಾವು 'ಸಂಕ್ರಮಣ' ಓದುತ್ತೇವೆ. ಇಂಥ ಲೇಖನಗಳಿಂದ ನಮ್ಮಂಥ ಅವಿದ್ವಾಂಸರಿಗೆ ಅನ್ಯಾಯವಾಗದೆ ?

**ಪಿ. ಎಸ್. ಪಾಟೀಲ**
**ಬಿಜಾಪುರ**

೩

ಶ್ರೀ ಓ ಎಲ್ ನಾಗಭೂಷಣ ಸ್ವಾಮಿಯವರ "ಅಕ್ಕನ ವಚನ: ಹೊಳೆದ ಅರ್ಥ" ಒಂದು ಅರ್ಥಪೂರ್ಣ ವಿಶ್ಲೇಷಣೆ. ವಚನಗಳ ಅಂತರ್ಯದ ಅರ್ಥವನ್ನು ಅರಿಯಲು, ಅನುಭವಿಸಲು ಒಂದಲ್ಲ ಹತ್ತಾರು ಹೊಸ ದಿಗಂತಗಳನ್ನು ಈ ವಿಶ್ಲೇಷಣೆ ತೆರೆದಿಟ್ಟಿದೆ

ಇದುವರೆಗೂ ವಚನಗಳನ್ನು ಸಂಗ್ರಹಿಸಿದವರು, ಸಂಪಾದಿಸಿದವರು, ವ್ಯಾಖ್ಯಾನಿಸಿದವರು ಓದುಗನಿಗೆ ಸ್ವಾತಂತ್ರ್ಯವಿಲ್ಲದಂತೆ ಮಾಡಿ ಒಂದು ಸ್ಥಾಪಿತ ಅಥವಾ ತಮ್ಮದೇ ಅರ್ಥವನ್ನು ಹೇಳಿ ಅನರ್ಥಗಳಿಗೆ ಅವಕಾಶ ಕಲ್ಪಿಸಿ ಕೊಟ್ಟಿದ್ದಾರೆ ಎಂದು ಹೇಳಿದರೆ ಯಾರೂ ಹುಬ್ಬುಗಂಟಿಕ್ಕುವ ಕಾರಣವಿಲ್ಲ.

'ಕೇಳುವ ಮಾತು ಓದುವ ಅಕ್ಷರವಾಗಿ' ಜನಪದ ಸಾಹಿತ್ಯ ತನ್ನ ನಿಜಾರ್ಥವನ್ನು' ಅನೇಕ ಕಡೆ ಕಳೆದುಕೊಂಡುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

"ಅರ್ಥವೆಂಬುದು ಆಗುವ ಅನುಭವವೇ ಹೊರತು ಇರುವ ಸಂಗತಿಯಲ್ಲ" ಮತ್ತು "ಓದುವುದೂ ಒಂದು ಸ್ವತಂತ್ರ ಕ್ರಿಯೆ"- ಈ ಮಾತುಗಳು ನಮ್ಮ ಸಾಹಿತ್ಯದ ಪುನರ್ ಪರಿಶೀಲನೆ ಮತ್ತು ಪುನರ್ ಮೌಲ್ಯಮಾಪನಕ್ಕೆ ದಾರಿದೀಪವಾಗಬಲ್ಲವು.

ಈ ದೇಶದಲ್ಲಿ ಉಸಿರಾಡಿಸಲೂ ಸ್ವಾತಂತ್ರ್ಯವಿಲ್ಲದ 'ವ್ಯವಸ್ಥೆ' ಸಾವಿರಾರು ವರ್ಷಗಳ ಹಿಂದೆಯೇ ನಿರ್ಮಾಣಗೊಂಡಿದೆ; ಅದು, ಏನಾದರೂ ಹೊಸದು, ಪ್ರತಿಭಟನಾತ್ಮಕವಾದುದು ಮೊಳಕೆಯೊಡೆಯುವಷ್ಟರಲ್ಲಿಯೇ ಅದರ ಕತ್ತನ್ನು ಹಿಚುಕುವ ದುಷ್ಟ ಶಕ್ತಿಯನ್ನು ಗಳಿಸಿಕೊಂಡಿದೆ. ಇಂಥ ದುಷ್ಟ ಶಕ್ತಿಯ ವಿರುದ್ಧ ಹೋರಾಡಿ, ಸರ್ವರಿಗೂ ವೈಚಾರಿಕ ಸ್ವಾತಂತ್ರ್ಯವನ್ನು ತಂದುಕೊಟ್ಟ ವಚನಕಾರರ ವಚನಗಳಿಗೆ ಸ್ವತಂತ್ರವಾಗಿ ಅರ್ಥೈಸುವ ಅವಕಾಶವನ್ನು ಅಳಿಸಿ ಮತ್ತೆ ಸ್ಥಾಪಿತ ವ್ಯವಸ್ಥೆಯ ಕತ್ತಿಗೆ ನಮ್ಮ ತಲೆಯೊಡ್ಡುವಂತೆ ನಮ್ಮ ಮನಸ್ಸುಗಳನ್ನು ನಮಗರಿಯದಂತೆ ಸಿದ್ಧಗೊಳಿಸಿದ್ದು ಮಹಾದುರಂತ.

ಓ. ಎಲ್. ನಾಗಭೂಷಣ ಸ್ವಾಮಿಯವರ "ಓದುವ, ವಿಚಾರ ಮಾಡುವ, ಅನುಭವಿಸುವ ಕ್ರಿಯೆಗೆ ಸ್ವಾತಂತ್ರ್ಯ ಬೇಕೆಂದು" ಹೇಳಿದ ಮಾತುಗಳು ಪಾಲನೆಯಲ್ಲಿ ಬಂದರೆ, ಸಾಹಿತ್ಯದ ಮಟ್ಟಿಗೊಂದೇ ಅಲ್ಲ, ಸಮಕಾಲೀನ ಭಾರತೀಯ ಸಂದರ್ಭದಲ್ಲಿ ಜೀವನಕ್ಕೆ ಅವಶ್ಯವಾಗಿ ಬೇಕಾದ "ಪರ್ಯಾಯಗಳ" ನಿರ್ಮಾಣಕ್ಕೂ ಕ್ರಿಯಾಶೀಲ ಚಿಂತನೆಗಳಿಗೆ ಎಡಮಾಡಿಕೊಡುತ್ತವೆ.

ಶಾಂತರಸ
ರಾಯಚೂರು

# ಗ್ರಾಮದೇವತೆಗಳು ಹಾಗೂ ಮಾರ್ಕ್ಸ್‌ವಾದ ಎತ್ತಣಿಂದೆತ್ತ ?

ಗ್ರಾಮದೇವತೆಗಳು ಹಾಗೂ ಊರೊಟ್ಟಿನ ಸಂಬಂಧಗಳ ಬಗೆಗಿನ ನನ್ನ ಲೇಖನಕ್ಕೆ (ಸಂಕ್ರ. ಆಗಸ್ಟ್. ೯೩) ಡಾ. ಸಿ. ಪಾರ್ವತಮ್ಮನವರು ಬರೆದ ಪ್ರತಿಕ್ರಿಯೆಯನ್ನು (ಸಂಕ್ರ. ನವೆಂ. ೯೩) ಕಂಡು ಅಚ್ಚರಿಯೂ ನಿರಾಶೆಯೂ ಆದವು. ನನ್ನ ಲೇಖನವನ್ನು ಪ್ರಶ್ನಿಸಲು ಅವರು ಹಾಕಿಕೊಂಡ ಪೀಠಿಕೆಯನ್ನು ನೋಡಿ ಅಚ್ಚರಿಯಾಯಿತು: ವಿಶ್ವವಿದ್ಯಾಲಯಗಳಲ್ಲಿ ದಶಕಗಳ ಕಾಲ ಸಮಾಜ ಶಾಸ್ತ್ರವನ್ನು ಪಾಠ ಮಾಡಿದ ಪ್ರಾಧ್ಯಾಪಕಿಯೊಬ್ಬರು ನನ್ನಂಥ ಸಾಹಿತ್ಯದ ಸಾಮಾನ್ಯ ವಿದ್ಯಾರ್ಥಿಯನ್ನು ಕಲ್ಲೂ ಆಗದಷ್ಟು ಸಾಧಾರಣ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಕ್ಕೆ ನಿರಾಶೆಯಾಯಿತು. ನನ್ನ ಪ್ರಕಾರದ ಗಂಭೀರವಾದ ವಾಗ್ವಾದಕ್ಕೆ ಆಹ್ವಾನಿಸುವ ಯಾವ ಮುಖ್ಯ ಚಿಂತನೆಯನ್ನೂ ಅವರು ತಮ್ಮ ಪ್ರತಿಕ್ರಿಯೆಯಲ್ಲಿ ಮಂಡಿಸಿಲ್ಲವಾಗಿ, ಅದನ್ನು ಹಿಡಿದುಕೊಂಡು ಸಂವಾದಕ್ಕೆ ಇಳಿಯಬೇಕು ಎಂಬ ಒತ್ತಡವುಂಟಾಗುತ್ತಿಲ್ಲ. ಆದರೆ ಆ ಪ್ರತಿಕ್ರಿಯೆಯೊಳಗೆ, ಎಡಪಂಥೀಯ ಚಿಂತನೆಗಳನ್ನು ಕುರಿತು ಸಾಮಾನ್ಯವಾಗಿ ರೂಢಿಯಲ್ಲಿರುವ ಪ್ರಾತಿನಿಧಿಕ ಪೂರ್ವ ಗ್ರಹಗಳಿರುವುದರಿಂದ ಚರ್ಚೆಗಾಗಿ ಈ ಕೆಲವು ಮಾತುಗಳನ್ನಾಡುತ್ತೇನೆ.

ಡಾ. ಪಾರ್ವತಮ್ಮನವರು ನಾನು 'ಮಾರ್ಕ್ಸ್‌ವಾದಕ್ಕೆ ತೆಕ್ಕೆಬಿದ್ದವನು' ಎಂದಿದ್ದಾರೆ, ಅದು ಹೌದೋ ಅಲ್ಲವೋ ಎಂಬ ಪ್ರಶ್ನೆ ಒತ್ತಟ್ಟಿಗಿರಲಿ. ಆದರೆ ಮಾರ್ಕ್ಸ್‌ವಾದವು ಕಾಮಾಲೆ ಕಣ್ಣಿನ ದೃಷ್ಟಿಗೆ ಕಾರಣವಾಗುತ್ತದೆ ಎಂಬ ಅವರ ತಿಳಿವಳಿಕೆ ಮಾತ್ರ ವಿವೇಚನೆಯಿಂದ ಕೂಡಿದ್ದಲ್ಲ. ನಮ್ಮೆದುರಿನ ಬದುಕನ್ನು, ನಮ್ಮನ್ನಾವರಿಸಿಕೊಂಡಿರುವ ಸಾಮಾಜಿಕ ಪರಿಸರವನ್ನು, ಅರ್ಥಮಾಡಿಕೊಳ್ಳಲು ನಮಗೆ ಸಿಕ್ಕಿರುವ ಹಲವು ದೃಷ್ಟಿಕೋನಗಳಲ್ಲಿ ಮಾರ್ಕ್ಸ್‌ವಾದವೂ ಒಂದಾಗಿದೆ, ಈ ದೃಷ್ಟಿಕೋನದ ಮೂಲಕ ಸಂಸ್ಕೃತಿಯನ್ನು ಕುರಿತು ಭಿನ್ನವಾಗಿ ತೀಕ್ಷ್ಣವಾಗಿ ಆಲೋಚಿಸಲು ಸಾಧ್ಯವಾಗಿದೆ, ನಮ್ಮ ಪರಂಪರೆಯ ಚರ್ಚೆಯಲ್ಲಿ ಉಪಯುಕ್ತವಾದ ಒಳನೋಟಗಳನ್ನು ಪಡೆದುಕೊಳ್ಳಲೂ ಸಾಧ್ಯವಾಗಿದೆ. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ರೋಮಿಲಾ ಥಾಪರ್, ಮೊದಲಾದ ಅನೇಕ ಎಡಪಂಥೀಯ ಚಿಂತಕರು ತತ್ವಶಾಸ್ತ್ರ, ಚರಿತ್ರೆಗಳಲ್ಲಿ ಮಾಡಿರುವ ಬರವಣಿಗೆಯನ್ನು ಕುರಿತು ಇವರು ಏನು ಹೇಳುತ್ತಾರೆ ? ನನ್ನಂಥವರ ತಿಳಿವಳಿಕೆಯನ್ನು ಬೆಳೆಯಿಸಿರುವ ಇಂಥ ಚಿಂತಕರನ್ನು ನಾನಂತೂ ಕೃತಜ್ಞತೆಯಿಂದ ನೆನೆಯುತ್ತೇನೆ. ಯಾವುದೇ ಒಂದು ಸಿದ್ಧಾಂತವು ಕುರುಡಾಗಿ ಮೆತ್ತಿಕೊಂಡಾಗ ಕಣ್ಣು ಮುಚ್ಚುವ ಮಬ್ಬು ಆದೀತು, ಆದರೆ ಅದೇ ಸಿದ್ಧಾಂತವು ಚಲನಶೀಲವಾದಾಗ ವಿವೇಕವಾಗಿ ಕಣ್ಣು ಬೆಳಕಿನ ಶಲಾಕೆಯೂ ಆದೀತು. ಒಂದು ತತ್ವವನ್ನು ನೆಚ್ಚಿಯೂ ಅದರೊಂದಿಗೆ ವಿಮರ್ಶಾತ್ಮಕವಾಗಿದ್ದಾಗ ಸೃಜನಶೀಲವಾಗಿದ್ದಾಗ ಜಡವಾಗುವುದು ಸಾಧ್ಯವಿಲ್ಲ. ನಿಜವಾದ ಎಡಪಂಥೀಯ ಚಿಂತನೆಯು ಎಂದೂ ಪಕ್ಷ ರಾಜಕಾರಣದಲ್ಲಿರುವಂತೆ Strategy ಗಾಗಿ ಹುಸಿ ನುಡಿಯುವುದು ಅಥವಾ ಕೇವಲ ಪ್ರತಿಪಾದಿಸುವುದು ಆಗಿರುವುದಿಲ್ಲ. ಪಾರ್ವತಮ್ಮನವರು, ಮಾರ್ಕ್ಸ್‌ವಾದೀ ಚಿಂತನೆಗೂ, ಮಾರ್ಕ್ಸ್‌ವಾದದ ಹೆಸರಿನಲ್ಲಿರುವ ಪಕ್ಷರಾಜಕಾರಣ ಅಥವಾ ಸರ್ಕಾರಿ ಪ್ರಭುತ್ವಗಳಿಗೂ ಸೂಕ್ಷ್ಮ ವ್ಯತ್ಯಾಸವನ್ನು ಮಾಡಿಕೊಳ್ಳದೆ ತರ್ಕ ತಪ್ಪಿದ್ದಾರೆನಿಸುತ್ತದೆ. ಹಾಗಾದರೆ ರಿಪಬ್ಲಿಕನ್ ಪಕ್ಷ ಮತ್ತು ದಲಿತ ಸಂಘಟನೆಗಳು ಒಡೆದು ಹೋಗಿರುವುದಕ್ಕೂ ಅಂಬೇಡ್ಕರ್ ಚಿಂತನೆಗಳಿಗೂ ಇವರು ಹೀಗೇ ತರ್ಕ ಸಂಬಂಧ ಕಲ್ಪಿಸುತ್ತಾರೇನು ?

"ರಷ್ಯಾದಲ್ಲಿ ಕಮ್ಯುನಿಸಂಗೆ ಆದ ಗತಿ"ಯ ಬಗ್ಗೆ ಪಾರ್ವತಮ್ಮನವರು ಮಾತಾಡುವಾಗ 'ಈಗಲಾದರೂ ಇಂಡಿಯಾದಲ್ಲಿ ಮಾರ್ಕ್ಸ್‌ವಾದಿ ಚಿಂತನೆ ಯಾರೂ ಮಾಡಬಾರದು' ಎಂಬ ದನಿಯನಿಟ್ಟಿದ್ದಾರೆ. ಸಮಾಜವಾದದ ಆಧಾರದಲ್ಲಿ ಶುರುವಾಗಿ ಆಮೇಲೆ ಜಡಗೊಂಡು ಜನ ದೂರವಾಗುತ್ತಾ ವಿಮರ್ಶೆಯನ್ನು ಸಹಿಸದೆ ಹೋದ ಪ್ರಭುತ್ವಗಳನ್ನು ತಮ್ಮ ದೇಶದೊಳಗಿನ ಸಾಂಸ್ಕೃತಿಕ ವೈವಿಧ್ಯವನ್ನು ರಾಷ್ಟ್ರೀಯ ಚಳುವಳಿಗಳನ್ನು ಅರಿಯದೇ ಹೋದ ಕೇಂದ್ರೀಕರಣವನ್ನು ತಮ್ಮ ತಪ್ಪುಗಳ ಭಾರದಿಂದ ತಾವೇ ಕುಸಿದು ಹೋದ ಸರ್ಕಾರಿ ವ್ಯವಸ್ಥೆಗಳನ್ನು ಸೂಕ್ಷ್ಮತೆಯುಳ್ಳ ಯಾರೂ

ಸಮರ್ಥಿಸುವುದಿಲ್ಲ, ಸಮರ್ಥಿಸಬಾರದು; ಆದರೆ ಈ ಜಾಗತಿಕ ಘಟನೆಗಳು, ಇಂಡಿಯಾದ ಬಲಪಂಥೀಯರಿಗೆ, ಅಮೇರಿಕಾ ಯೂರೋಪಿನ ಸಾಮ್ರಾಜ್ಯ ಶಾಹಿಗಳಿಗೆ, ಮುಕ್ತಮಾರುಕಟ್ಟೆಯ ಸುಂದರ ಹೆಸರಿನಲ್ಲಿ ನುಗ್ಗಿ ಬರುತ್ತಿರುವ ಬಹುರಾಷ್ಟ್ರೀಯ ಕಂಪನಿಗಳಿಗೆ ತಮ್ಮ 'ನೈತಿಕ' ಬಲವನ್ನು ಹೆಚ್ಚಿಸಿಕೊಳ್ಳಲು ಸಿಕ್ಕ ಆಧಾರವಾಗಿ ಹೋಗಿರುವುದನ್ನು ತಿಳಿಯದಿರುವುದು ನಮ್ಮ ವಿದ್ವಾಂಸರ ಭೋಳೇತನವಾಗಿದೆ; ಎಡಪಂಥೀಯವಾದ ಎಲ್ಲವನ್ನು ನಿರಾಕರಿಸುವವರಿಗಂತೂ ಇದೊಂದು ನೆಪವಾಗಿ ಬಿಟ್ಟಿದೆ. 'ರಷ್ಯಾದಲ್ಲಿ ಸೊಂಟಮುರಿದ ಕಮ್ಯುನಿಸಂಗೆ ಇಂಡಿಯಾದಲ್ಲಿ ಗೂಟಕೊಟ್ಟು ನಿಲ್ಲಿಸುವುದು ಬೇಡ' ಎಂದು ಗೋಡೆಗಳ ಮೇಲೆ ಆಕರ್ಷಕವಾಗಿ ಬರೆಯಿಸುತ್ತಿರುವ ಬಿ ಜೆ ಪಿ ಗಳು, ಆಳದಲ್ಲಿ ಎಲ್ಲ ಎಡಚಿಂತನೆಗಳನ್ನೇ ಗುಡಿಸಿ ಹಾಕುವುದನ್ನು ಉದ್ದೇಶಿಸಿದ್ದಾರೆ ಮತ್ತು ಪ್ರತಿಯಾಗಿ ಏಕನಾಯಕ ಪರಂಪರೆಯ ಫ್ಯಾಸಿಸ್ಟ್ ರಾಜಕಾರಣವನ್ನು ಗೂಟ ಕೊಟ್ಟು ನಿಲ್ಲಿಸಬಯಸುತ್ತಾರೆ ಎಂದು ತಿಳಿಯಬೇಕಾಗಿದೆ. ಇವರಿಗಾದರೂ ಒಂದು ತರ್ಕವಿದೆ, ಉದ್ದೇಶವಿದೆ. ಅದನ್ನು ಅರ್ಥಮಾಡಿಕೊಳ್ಳಬಹುದು, ಆದರೆ ಎಡಪಂಥೀಯವಾದುದನ್ನೇ ಸರಳೀಕರಿಸುವಂಥ, ನಿರಾಕರಿಸುವಂಥ ಪ್ರತಿಕ್ರಿಯೆಗಳನ್ನು ಹೇಗೆ ಅರ್ಥಮಾಡಿಕೊಳ್ಳುವುದು ? ಈಗ ಎಡಪಂಥಗಳಿಗೆ ಅಗತ್ಯವಿರುವುದು ನಿಷ್ಠುರವಾದ ವಿಮರ್ಶೆ. ವಿಮರ್ಶೆ ಬೇರೆ, ನಿರಾಕರಣೆ ಬೇರೆ ತಾನೆ ? ಸರಳೀಕರಣ ಅಥವಾ ಕೇವಲ ನಿರಾಕರಣೆಗಳು ತಮಗರಿಯದೆ ಬಲಪಂಥೀಯವಾದುದನ್ನು ಕೆಲವೊಮ್ಮೆ ಸಮರ್ಥಿಸುವ ಭೋಳೇತನ ಮಾಡುತ್ತಿರುತ್ತವೆ. ಯಾಕೆಂದರೆ ಈ ವಿದ್ವಾಂಸರು, ಇದೇ ತರ್ಕ ಹೂಡಿ, 'ಪ್ರಜಾಪ್ರಭುತ್ವ' ವೆಂಬ ತತ್ವದ ಹೆಸರಿನಲ್ಲಿ ಈ ಹೊತ್ತು ಅಮೆರಿಕಾ ಜಗತ್ತಿನ ಸಣ್ಣಪುಟ್ಟ ದೇಶಗಳನ್ನು ಮಿಲಿಟರಿ ಬಲದಿಂದ ಹೆದರಿಸುವ ಪೋಲಿಸನಾಗಿರುವ ಬಗ್ಗೆ ಗ್ಯಾಟ್-ಡಂಕೆಲ್ ಪ್ರಸ್ತಾಪಗಳ ಮೂಲಕ ದುರ್ಬಲರ ದುಃಸ್ವಪ್ನವಾಗಿರುವ ಬಗ್ಗೆ ಏನನ್ನೂ ಹೇಳುವುದಿಲ್ಲ. ಇದು "ಪ್ರಜಾಪ್ರಭುತ್ವಕ್ಕಾದ ಗತಿ" ಎಂದು ಸಮೀಕರಣ ಮಾಡುವುದಿಲ್ಲ.

ಇದು ರಷ್ಯಾದ 'ಸಮಾಜವಾದಿ' ಹೆಸರಿನಲ್ಲಿದ್ದ ಪ್ರಭುತ್ವಗಳ ಪರವಾಗಿ ಅಥವಾ ನಮ್ಮ ಇಂಡಿಯಾದ ಕಮ್ಯುನಿಸ್ಟ್ ಪಕ್ಷಗಳ ಪರವಾಗಿ ಹೂಡುವ ವಾದವಲ್ಲವೆಂದು ಮತ್ತೊಮ್ಮೆ ಸ್ಪಷ್ಟಪಡಿಸುತ್ತೇನೆ. ನಮ್ಮ ಜನಸಾಮಾನ್ಯರ ಸಂಸ್ಕೃತಿಯ ಬೇರುಗಳಿಗೆ ಇಳಿಯದೆ, ಅದನ್ನು ಅರ್ಥಮಾಡಿ ಕೊಳ್ಳದೆ ವರ್ಗಸಂಘರ್ಷದ ಬಗ್ಗೆ ವಿಶ್ವಸ್ಥವಾದ ಪರಿಭಾಷೆಯಲ್ಲೇ ಮಾತಾಡುವ ನಮ್ಮ ಪಾರ್ಟಿ ಕಮ್ಯುನಿಸ್ಟರ ಬಗ್ಗೆ ಸಮರ್ಥಿಸಿ ಕೊಳ್ಳುವಂಥದ್ದೇನೂ ಉಳಿದಿಲ್ಲ. ಆದರೆ ರಾಜಕೀಯಪ್ರಜ್ಞೆಯಲ್ಲಿ ತಾತ್ವಿಕ ಎಚ್ಚರದಲ್ಲಿ ವಿಶ್ಲೇಷಿಸಬೇಕಾದ ಸಂಕೀರ್ಣಸಂಗತಿಯನ್ನು ಏಕಮುಖವಾಗ ಮುಗ್ಧತೆಯಲ್ಲಿ ಜನಪ್ರಿಯ ಶೈಲಿಯಲ್ಲಿ ನಮ್ಮ ಸಮಾಜಶಾಸ್ತ್ರಜ್ಞರು ಮಾತಾಡ ವುದರಿಂದ ಉಂಟಾ

ಗುವ ಪರಿಣಾಮಗಳೇನು ಎಂದು ಯೋಚಿಸಬೇಕಾಗಿದೆ. ಮಾರ್ಕ್ಸ್‌ವಾದದ ಬಗ್ಗೆ ಬೇಸುಮಾತನ್ನಾಡುವ ಪಾರ್ವತಮ್ಮನವರೇ, ಒಂದೆಡೆ "ಮಾರ್ಕ್ಸಿಸಂ ಎಲ್ಲಾ ಕಾಲದೇಶಗಳಲ್ಲೂ ಒಂದೇ ತೆರನಾಗಿಲ್ಲ" ಎನ್ನುತ್ತಾರೆ! ಅಂದರೆ ಅವರ ಮಾತಿನ ಪ್ರಕಾರವೇ ಭಾರತದಂಥ ದೇಶದಲ್ಲಿ ರಷ್ಯಾದಲ್ಲಿ ಈಗ ಯೋಚಿಸುತ್ತಿರುವಂತೆ ಯೋಚಿಸಬೇಕಾಗಿಲ್ಲ ಎಂದಾಯಿತಲ್ಲವೇ ? ಅದರಲ್ಲೂ ಕೋಮುದ್ವೇಷವನ್ನು ಪ್ಲೇಗಿನಂತೆ ಹರಡುತ್ತಾ, ನಮ್ಮ ಸಂಸ್ಕೃತಿಯ ವೈವಿಧ್ಯವನ್ನೆಲ್ಲ ಗುಡಿಸಿ ಏಕಾಕೃತಿಯ ವೈದಿಕಸಂಸ್ಕೃತಿಯನ್ನು ಹೇರ ಬಯಸುತ್ತಿರುವ ರಾಜಕಾರಣದ ಹುನ್ನಾರಗಳ ಈ ಹೊತ್ತಿನಲ್ಲಿ ಏನು ಮಾಡಬೇಕು ? ನಾವು ಯೋಚನೆ ಮಾಡುತ್ತಿಪ್ಪರಲ್ಲೇ ನಮಗರಿಯದಂತೆ ನಮ್ಮ ನರನಾಡಿಗಳನ್ನು ಆಕ್ರಮಿಸಿಕೊಳ್ಳುತ್ತಿರುವ ಬಹುರಾಷ್ಟ್ರೀಯ ಕಂಪನಿಗಳ ಹುನ್ನಾರಗಳ ಈ ಹೊತ್ತಿನಲ್ಲಿ ನಾವೇನು ಮಾಡಬೇಕು ? ಇದು ಈಗಣ ಸವಾಲು. ನಮ್ಮ ಸಾಹಿತ್ಯ, ಸಮಾಜ, ಸಂಸ್ಕೃತಿ, ರಾಜಕಾರಣಗಳ ನಡುವೆ ನಿಂತು ಎಡಪಂಥೀಯವಾಗಿ ಯೋಚಿಸಲು ಕಲಿಯುತ್ತಿರುವ ನಾನು, ಎಡಪಂಥೀಯನಾಗಲು ಅಭಿಮಾನ ಪಡುತ್ತೇನೆ, ಯಾಕೆಂದರೆ ಅರಾಜಕವಾಗಿ ಆಲೋಚಿಸುವುದಕ್ಕಿಂತ ಇದು ಮೇಲು.

ಇನ್ನು ಗ್ರಾಮದೇವತೆಗಳ ಬಗೆಗಿನ ನನ್ನ ಲೇಖನದ ವಿಷಯ, ಆ ನನ್ನ ಲೇಖನದ ಉದ್ದೇಶವೆಂದರೆ, ಗ್ರಾಮದೇವತೆಗಳ ಹಬ್ಬಗಳಲ್ಲಿ ಊರೊಟ್ಟಿನ ಜನರು ಬೆರೆಯುವುದನ್ನು ನಮ್ಮ ಜನಪದ ವಿದ್ವಾಂಸರು 'ಸಾಮರಸ್ಯ' 'ಒಗ್ಗಟ್ಟು' ಎಂದು ಏಕಕಂಠದಲ್ಲಿ ಮೆಚ್ಚುಗೆ ಮಾಡುವುದನ್ನು ಪ್ರಶ್ನಿಸುವುದಾಗಿತ್ತು. ಜಾತಿ ಸಮಾಜದಲ್ಲಿ, ಫ್ಯೂಡಲ್ ಸಂಬಂಧಗಳಲ್ಲಿ ಆ 'ಸಾಮರಸ್ಯ' ಒಗ್ಗಟ್ಟುಗಳ ಒಳ ಸ್ವರೂಪವೇನೆಂಬುದನ್ನು ಪರಿಶೀಲಿಸುವುದಾಗಿತ್ತು. ಈ ಹಬ್ಬಗಳು ಸಮುದಾಯವು ತನ್ನ ಸೃಜನಶೀಲತೆಯನ್ನೂ ಜೀವಂತಿಕೆಯನ್ನು ಪ್ರಕಟಿಸುವ ಅಪೂರ್ವ ಸಾಂಸ್ಕೃತಿಕ ಸಂದರ್ಭಗಳು ಎಂಬುದನ್ನು ಮೊದಲಿಗೇ ಸ್ಪಷ್ಟಪಡಿಸಿ, ಊರೊಟ್ಟಿನ ಸಂಬಂದಗಳ ಆರ್ಥಿಕ – ರಾಜಕೀಯ ಮಗ್ಗುಲಿನ ವಿಶ್ಲೇಷಣೆ ಮಾಡಲೆತ್ನಿಸಿದ್ದೆನು. ಆದರೆ ಪಾರ್ವತಮ್ಮನವರು ಇದನ್ನು ಗಮನಿಸದೆ 'ಹಬ್ಬಗಳು ಬೇಸಿಗೆ ಕಾಲದಲ್ಲಿ ಜರುಗುತ್ತವೆ' ಎಂದೆಲ್ಲಾ ಪ್ರಾಥಮಿಕ ವಿವರಗಳ ಮೂಲಕ ಕತೆ ಶುರುಮಾಡಿದ್ದಾರೆ. ಸಮಾಜಶಾಸ್ತ್ರಜ್ಞರು ಚಿಂತನೆ ಮಾಡುವ ಈ ವಿಧಾನವು ತುಂಬ ಸಾಂಕೇತಿಕವಾಗಿದೆ. ಕೊನೇಪಕ್ಷ ಎಂ. ಎನ್. ಶ್ರೀನಿವಾಸರೊಡನೆ ನಮ್ಮ ಭಿನ್ನಾಭಿಪ್ರಾಯಗಳನಿಟ್ಟುಕೊಂಡೇ ಚರ್ಚೆಗಿಳಿಯಬಹುದು. ಆದರೆ ಕರ್ನಾಟಕದ ಎಷ್ಟೋ ನಿವೃತ್ತ ಸಮಾಜಶಾಸ್ತ್ರಜ್ಞರು ಪುಂಖಾನುಪುಂಖವಾಗಿ ಕನ್ನಡದಲ್ಲಿ ಪುಸ್ತಕ ಪ್ರಕಟಿಸುತ್ತಿದ್ದರೂ ಸಂಸ್ಕೃತಿಯ ಚರ್ಚೆಯಲ್ಲಿ ನಮಗೇಕೆ ಪ್ರಯೋಜನವಾಗುತ್ತಿಲ್ಲ ? ತಮ್ಮೆಲ್ಲ ಮಿತಿಗಳಲ್ಲೂ ಚರಿತ್ರೆ, ಸಮಾಜವಿಜ್ಞಾನ, ತತ್ವಶಾಸ್ತ್ರ, ಮಾನವಶಾಸ್ತ್ರಗಳ ಮಾನವಿಕ

ಶಿಸ್ತುಗಳಲ್ಲಿ ಬಹಳ ಉಪಯುಕ್ತವಾದ ಚಿಂತನೆ ನಡೆಯಿಸಿದವರು ಹೆಚ್ಚಾಗಿ ಸಾಹಿತ್ಯ ಕ್ಷೇತ್ರದವರೇ ಎಂಬ ನನ್ನ ನಂಬಿಕೆ ಗಟ್ಟಿಯಾಯಿತು. ಕನ್ನಡದ ಗಂಭೀರವೂ ಸೂಕ್ಷ್ಮವೂ ಆದ ಮಾನವಿಕ ಮನಸ್ಸುಗಳು ನನ್ನ ಲೇಖನಕ್ಕೆ ಪ್ರತಿಕ್ರಿಯಿಸಿದ್ದರೆ, ಕಲಿಯಲಿಚ್ಛಿಸುವ ನನಗೆ ಖಂಡಿತಾ ಉಪಯೋಗವಾಗುತ್ತಿತ್ತು.

ರಹಮತ್ ತರೀಕೆರೆ.

ಪುಸ್ತಕ ವಿಮರ್ಶೆ

ಕುಂವಿಪ್ರ

---

## ತಲೆ

ತಲೆಗೆ
ತಲ ತಲಾಂತರದ ತಲೆಯಿಂದೆ
ತಿಲ ತೈಲ ತಾಲಕ್ಕೆ, ತರಲೆ ತಾಪತ್ರಯಂಕ್ಕೆ
ಮೆಚ್ಚುಗೆಯ ಮೇವಿಗೆ
ಮನದಾಳದ ಸೆಳೆತಕ್ಕೆ ಬಿಗಿತಕ್ಕೆ
ಕೂಡಿಸಲು, ಓಡಿಸಲು, ಕೆಣಕಿ ಕಾಲಾಡಿಸಲು
ಭೋಗ ಭಾಗ್ಯಕ್ಕೆ
ಪುಣ್ಯ ಸಂಪಾದನೆಗೆ
ಹಾದರದ ಹಾಸಿಗೆಗೆ
ಉರಿವ ಕೊಳ್ಳಿಗೆ ಮುಳುಗು ಕಡ್ಡಿಗೆ
ವಿಚಾರ ಅವಿಚಾರ ಸಾಹಿತ್ಯದ ಸುಗ್ಗಿಗೆ
ತಲೆ ಬುಡವಿಲ್ಲದೆ ಅಳೆದಳೆದು
ತಕರಾರಿಗೆಳೆಯುವುದಕ್ಕೆ
ತನ್ನ ತಾನೇ ಏರಿಸಲು ಇನ್ನೊಬ್ಬರನು ಇಳಿಸಲು
ಇಷ್ಟು, ಅಷ್ಟು, ಅಷ್ಟಿಷ್ಟು
ಬೇಕು ಬೇಡಗಳ
ಬೊಗಳೆ ಸಿದ್ಧಾಂತಗಳ
ರಗಳೆ ರಾದ್ಧಾಂತಗಳ
ರೂಪಿಸಿ ನಿರೂಪಿಸಲು
ಬೇಕು ಬೇಕೇ ಬೇಕು
ತಲೆ

## ಆತ್ಮ – ಪರಮಾತ್ಮ ವಿಚಾರ : ಭಾಸ್ಕರ ಪತ್ತಾರ

(ವಿಶ್ವಜ್ಞ ಪ್ರಕಾಶನ, ರಾಯಬಾಗ ; ೧೯೯೧)

ಭಾಸ್ಕರ ಪತ್ತಾರ ಅವರು ತಮ್ಮ ಸರಳ ಭಾಷೆಯಲ್ಲಿ ಒಂದು 'ಪವಾಡ'ವನ್ನೇ ಮಾಡಿದ್ದಾರೆ! ಆತ್ಮ – ಪರಮಾತ್ಮ, ಬ್ರಹ್ಮ, ಪರಬ್ರಹ್ಮ, ವೈಕುಂಠ, ಕೈಲಾಸ ... ಇತ್ಯಾದಿ. ಕಣ್ಣಿಗೆ ಕಾಣದ ಅಮೋಘವಾದ ಕಲ್ಪನೆಗಳಿಂದ ಕೂಡಿರುವ, ಇಡೀ ಜನಜೀವನ ಭಕ್ತಿ ಹಾಗು ಭೀತಿಯಿಂದ ನಮಸ್ಕರಿಸುವ ಅಂಶಗಳನ್ನು, ಅತಿ ಸಾಮಾನ್ಯನ ಹತ್ತಿರವೂ ತಂದಿಟ್ಟು 'ನೋಡು ಇಷ್ಟೇ ಇದರ ತತ್ವ.' ನೀನು ಪೂಜಿಸುತ್ತೀಯೋ, ಭಯಪಡುತ್ತೀಯೋ ಅದು ನಿನ್ನ ಇಷ್ಟ' ಎಂದು ಹೇಳಿದ್ದಾರೆ. ಈ ಪ್ರಯತ್ನ ಮಾನವ ಮೂರ್ಖನಾಗಿರುವ, ಮುಗ್ಧನಾಗಿರುವ, ವಂಚಕರಿಂದ ಸುಲಿಗೆಗೊಳಗಾಗುತ್ತಿರುವ ಈ ದಿನಗಳಿಗೆ ಅತ್ಯಂತ ಅಗತ್ಯವಾಗಿ ಬೇಕಿತ್ತು.

ಆತ್ಮ – ಪರಮಾತ್ಮ ವಿಚಾರದಲ್ಲಿ ಶ್ರೀಯುತ ಭಾಸ್ಕರ ಪತ್ತಾರ ಅವರು ಬಹಳ ವಿಚಾರಪೂರ್ಣವಾಗಿ ತಮ್ಮ ತರ್ಕವನ್ನು ಮುಂದಿಡುತ್ತಾರೆ. ಯಾವುದೇ ಪದಾರ್ಥ ವಿಷಯಗಳು ಅತಿ ಹಿಂಜುವಿಕೆ ಅಥವಾ 'ಅತಿ ಅಲಂಕಾರಗಳಿಂದ ತಮ್ಮ ಮೂಲರೂಪ' ವನ್ನು ಕಳೆದುಕೊಳ್ಳುತ್ತವೆ. ಹಾಗೇಯೆ ಅಲಂಕಾರ ಜಿಜ್ಞಾಸೆಗಳು, ಆತ್ಮ, ಪರಮಾತ್ಮ ಸ್ವರ್ಗ, ನರಕ ... ಎಲ್ಲಕ್ಕೂ ವಿಶೇಷವಾದ ಸ್ಥಾನಕೊಟ್ಟು ಯಾರಿಗೂ ಕೈಗೆಟಕದ ರೀತಿಯಲ್ಲಿ ಸಾಗುವಂತೆ ಮಾಡಿದವು. ಎಲ್ಲರಿಗೂ ಹತ್ತಿರವಾದ ಈ 'ಪದ'ಗಳು 'ಮಿಥಕ' ಗಳಾಗಿ ಪಂಡಿತ್ತೋತ್ತಮರಿಗೂ ಸಹ ನಿಲುಕದವುಗಳಾಗಿದ್ದು ಈ ಕಾರಣದಿಂದಲೇ ಅಸ್ನಿಸುತ್ತದೆ. ಮಾನವನನ್ನು ದಾನವನನ್ನಾಗಿ ಮಾಡುವುದು ಇಂತಹ ಸ್ವಾರ್ಥ ಮನೋಭಾವದ ಜಿಜ್ಞಾಸೆಗಳು.

ಈ ಪುಸ್ತಕ ಓದುವಾಗ ಮೂಡುವ ಪ್ರಶ್ನೆಗಳೆಂದರೆ 'ಆತ್ಮ' = ಉಸಿರು, ಇರುವವರೆಗೆ, 'ಬ್ರಹ್ಮ = ವಿಸ್ತಾರ ಆಗು, ಇವು 'ರೇತ'ವೇಕೆ ಆಗಬೇಕು ? ಆತ್ಮ, ಬ್ರಹ್ಮ, ರೇತ ಮೂರಕ್ಕೂ ಪ್ರತ್ಯೇಕ ಅಸ್ತಿತ್ವ ಮತ್ತು ಸ್ಥಾನಗಳನ್ನೇಕೆ ನೀಡಬಾರದು ! 'ಸ್ತ್ರೀಯರಿಗೆ ಆತ್ಮಜ್ಞಾನ ಬೇಕಿಲ್ಲವೆಂದು ನಿರಾಕರಿಸಿದ್ದು ಕಂಡುಬರುತ್ತದೆ.' ಎಂಬ ಸಾಲು ಆತ್ಮ = ರೇತ ಎಂಬ ವಾದಕ್ಕೆ ಸಾಕ್ಷಿಯಾದರೂ ಸಹ, ಸ್ತ್ರೀಯರಿಗೆ ಆತ್ಮಜ್ಞಾನ ಮಾತ್ರವಲ್ಲ ಯಾವುದೇ ಜ್ಞಾನವನ್ನು ಹೊಂದಲೂ ಅರ್ಹಳಲ್ಲ ಎಂದು ಅವಳನ್ನು ಗುರುಕುಲದಿಂದ ದೂರವೇ ಇಟ್ಟಿದ್ದರು ಮತ್ತು ಆತ – ರೇತವಾದರೆ, ಆತ್ಮ ಹತ್ಯೆ, ಆತ್ಮದಹನ ಆತ್ಮ ವಂಚನೆ ಪದಗಳೆಲ್ಲರ ಅರ್ಥವಾದರೂ ಏನು ?

'ಆತ್ಮಜ್ಞಾನವೆಂದರೇನು' ? ಎಂಬ ಪ್ರಶ್ನೆಗೆ ಉತ್ತರ ಆತ್ಮ – ರೇತವಾದರೆ ಸಿಗಲಾರದು. ಆತ್ಮ=ಉಸಿರು ಇರುವವರಗೆ ಎಂಬ ಮೂಲಾರ್ಥದೊಡನೆ ಶೋಧನೆ ನಡೆದಾಗ ಮಾತ್ರ ಅದರ ಬಳಕೆಯುತ್ತ ಸತ್ಯಾರ್ಥ ಶೋಧನೆ ಆಗುವುದು. ಆತ್ಮ ಉಸಿರು ಇರುವವರಗೆ ಎಂದಾದರೆ, ವ್ಯಕ್ತಿಯ ಉಸಿರು ಇರುವವರಗೆ ಅವನ ದೇಹ ಬದುಕಿರುತ್ತದೆ. ಅದು ನಿಂತ ಒಡನೆಯೇ ವ್ಯಕ್ತಿಯ ದೇಹದೊಂದಿಗೆ ಬದುಕು ಕೊನೆಗೊಳ್ಳುತ್ತದೆ. ಆದರೆ, 'ಉಸಿರು' ಅಂದಾಕ್ಷಣ ಅದು ಕೇವಲ ದೇಹಕ್ಕೆ ಮಾತ್ರ ಸಂಬಂಧಿಸಿಲ್ಲ. ವ್ಯಕ್ತಿಯ ಬದುಕಿಗೆ ಸಂಬಂದಿಸಿದ್ದು. ಆತ ಬಾಳಿದ ರೀತಿ, ಅವನ ಬದುಕಿನ ಒಳಿತು ಕೆಡಕು ವ್ಯಕ್ತಿಯ ಮೌಲ್ಯ, ವಿಚಾರ ಎಲ್ಲವೂ ಅವನ ಬದುಕಿನೊಂದಿಗೆ ಸಂಬಂಧವಿದ್ದವರ ಬದುಕುಗಳ ಮೇಲೆ ಪರಿಣಾಮ ಬೀರುತ್ತದೆ. ಮತ್ತು ಈ ಸಂಬಂಧಿಗಳು ಅವರ ಕಿರಿಯ ಪೀಳಿಗೆ ಎಲ್ಲರ ಉಸಿರು ಇರುವವರೆಗೆ ಒಂದಲ್ಲ ಒಂದು ರೀತಿ ಆತನ ಪ್ರೀತಿ, ರೀತಿ, ನೀತಿ ಎಲ್ಲವೂ ಉಸಿರಾಡುತ್ತಿರುತ್ತವೆ. ಈ ನಿಟ್ಟಿನ ಆತ್ಮಕ್ಕೆ ಮರಣವಿಲ್ಲ ಎಂಬುದು ಹೆಚ್ಚು ಅರ್ಥಪೂರ್ಣವಾಗುತ್ತದೆ. ಬಹುಶಃ 'ಆತ್ಮಜ್ಞಾನ' ಎಂದರೆ ಈ ಕುರಿತು ಆತ್ಮದ ಬಗ್ಗೆ ಬೆಳಿಸಿಕೊಳ್ಳುವ ವೈಚಾರಿಕ ಮತ್ತು ಭಾವನಾತ್ಮಕ ಅರಿವು ಎನ್ನಬಹುದು.

ಅವ್ಯಕ್ತವಾಗಿದೆ ಎಂಬ ನಂಬಿಕೆಯಿಂದ ಅಂತಹ ಕಲ್ಪನೆಗಳಿಗೆ ಪ್ರತ್ಯೇಕ ಸ್ಥಾನಕೊಟ್ಟು ಶೋಷಣೆಗೆ ಒಳಗಾಗುತ್ತಿರುವ ಜನಸಮೂಹಕ್ಕೆ, ಅವುಗಳ ಮೂಲ ಅರ್ಥವನ್ನು ಹುಡುಕಿ ಹೊರತೆಗೆದು ವ್ಯಕ್ತವಾಗುವಂತೆ ಮಾಡಿರುವ ಪ್ರಯತ್ನ ಶ್ಲಾಘನೀಯವಾದುದು. ಈ ನಿಟ್ಟಿನಲ್ಲಿ 'ಆತ್ಮ–ಪರಮಾತ್ಮ ವಿವೇಚನೆ' ಜನಕ್ಕೆ ಹತ್ತಿರವಾಗುತ್ತವೆ.

ಎಂ. ಆರ್. ಸುಂದಾರವಲ್ಲಿ

## ಉಳಿಯುವ ಅಳಿಗಳು: ಸದಾಶಿವ ಒಡೆಯರ

(ತುಂಗಾ ತುಷಾರ ಪ್ರಕಾಶನ ಧಾರವಾಡ, ೧೯೯೧.)

ಕರ್ನಾಟಕ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳಾದ ಶ್ರೀ ಸದಾಶಿವ ಒಡೆಯರರವರ ಐದನೇ ಪ್ರಬಂಧ ಸಂಕಲನ ಇದು. 'ಜೀವನ ಕಲೆ' (೧೯೫೮) ಎಂಬ ಮೊದಲ ಪ್ರಬಂಧ ಸಂಕಲನವು ೭ ನೇ ಮುದ್ರಣ ಕಂಡಿದೆ. 'ರವೀಂದ್ರ ದರ್ಶನ' (೧೯೭೫) ಎಂಬ ಎರಡನೇ ಪ್ರಬಂಧ ಸಂಕಲನವು ೬೬ನೇ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದಿದೆಯಲ್ಲದೆ ೧೯೭೫–೭೬ನೇ ಸಾಲಿನ ಕ. ವಿ. ವಿ. ದ ಪಠ್ಯವಾಗಿತ್ತು. 'ಇದು ಜೀವನ' (೧೯೭೩) ಎಂಬ ಮೂರನೇ ಸಂಕಲನ ಮತ್ತು 'ಅಮೃತ ಜೀವನ' (೧೯೭೭) ಎಂಬ ನಾಲ್ಕನೇ ಸಂಕಲನದ ಹಲವಾರು ಪ್ರಬಂಧಗಳು ಒಂದಲ್ಲ ಒಂದು ಪಠ್ಯದಲ್ಲಿ ಸೇರ್ಪಡೆಯಾಗಿದ್ದವು.

ಹೀಗೆ, ಪ್ರಬಂಧ ರಚನೆಯಲ್ಲಿ ಪಳಗಿನವರಾದ, ನಮ್ಮ ನಡುವಿನ ಪ್ರಮುಖ ಚಿಂತನ ಶೀಲ ಬರಹಗಾರರಾದ ಸುಸಂಸ್ಕೃತ ವ್ಯಕ್ತಿತ್ವದ, ಕನ್ನಡ ಸಾಹಿತ್ಯ ಲೋಕಕ್ಕೆ ಚಿರ ಪರಿಚಿತರಾದ ಸದಾಶಿವ ಒಡೆಯರರ ಈ ಸಂಕಲನವು ಭಿನ್ನ ಭಿನ್ನ ಸಂದರ್ಭಗಳಲ್ಲಿ, ಭಿನ್ನ ಭಿನ್ನ ಮನೋಧರ್ಮದಲ್ಲಿ ರಚಿಸಿದ ಒಟ್ಟು ಇಪ್ಪತ್ತೊಂದು ಪ್ರಬಂಧಗಳ ಸಂಕಲನ. ಇವುಗಳಲ್ಲಿ ಹೆಚ್ಚಿನವು ರೇಡಿಯೋ ಭಾಷಣಗಳು, ನಿತ್ಯ ಜೀವನದ ಬಗ್ಗೆ ಹೊರಹೊಮ್ಮಿದ ಚಿಂತನೆಗಳು. ಸಾಹಿತ್ಯದ ಉದ್ದೇಶವೆಂದರೆ "ಮನುಷ್ಯನ ನಿತ್ಯ ಜೀವನದ ಚಿಂತೆಗಳನ್ನು ಮರೆಯಿಸಿ, ವಿಚಾರಗಳನ್ನು ಎತ್ತರಿಸಿ ಉದಾತ್ತ ಗೊಳಿಸುವುದು" ಎಂಬ ಜಾನ್ ಕೀಟ್ಸ್‌ನ ಆದರ್ಶವನ್ನು ಮೈಗೂಡಿಸಿಕೊಂಡಿರುವ ಇಲ್ಲಿಯ ಬರವಣಿಗೆಯಲ್ಲಿ ಉದ್ರೇಕಗೊಳಿಸುವ, ಕದಡುವ, ಕಲುಷಿತಗೊಳಿಸುವ ವಿಚಾರಗಳಿಲ್ಲ, ಏಕಾಂತ ಪ್ರಶಾಂತ ಮೌನ ಕ್ಷಣದಲ್ಲಿ ಹೊಳೆದ ವಿಚಾರಗಳು ಎಂದು ಹೇಳುವ ಲೇಖಕರು ತಮ್ಮ ಪ್ರಬಂಧದ ಒಳಹೊಕ್ಕು ನೋಡುವವರಿಗೆ ಅಣಿಮುತ್ತು ಸಿಗದಿದ್ದರೂ ಅಲೆಗಳ ಸ್ಪರ್ಶವಾದರೂ ಆಗಬಹುದು ಎಂಬ ಭರವಸೆಯಿಂದ "ಉಲಿಯುವ ಅಲೆಗಳು" ಎಂಬ ಶೀರ್ಷಿಕೆಯನ್ನು ಕೊಟ್ಟಿರುವೆನೆಂದು ವಿನಯದಿಂದ ತಿಳಿಸಿದ್ದರೂ ಕೆಲವು ಪ್ರಬಂಧಗಳನ್ನು ಆಳವಾಗಿ ಮನನ ಮಾಡಿದಾಗ ಸಿಗುವುದು ಶ್ರೇಷ್ಠವಾದ ಮುತ್ತುಗಳೇ.

ಪರಿಪಕ್ವ ವಿವೇಚನೆ, ಗಹನ ವಿಷಯ, ಸರಳ ಶೈಲಿ, ವಿಮರ್ಶೆಯ ಕಾವು, ಪ್ರಸಾದ ಗುಣ, ಸುಕುಮಾರಶೈಲಿ...... ಹೀಗೆ ಇನ್ನೂ ಅನೇಕ ವಿಶೇಷಣಗಳನ್ನು ಪಡೆಯುವ ಅರ್ಹತೆಯಿರುವ ಇಲ್ಲಿಯ ಗದ್ಯದ ಬರಹ ಓದುಗರ ಮನಸ್ಸನ್ನು ಪರಿಪಕ್ವಗೊಳಿಸುವ ಸಾಧನ. ಕಥೆ ಕಾದಂಬರಿಗಳಲ್ಲಿ ದುರ್ಲಭವಾದ ವಿಚಾರವಂತ ಗದ್ಯ, ತಿಳಿಯಾದ ಹದವಾದ ಸತ್ವಶಾಲಿಯಾದ ಗದ್ಯ, ಆಡಳಿತ ಯಂತ್ರದ ನಡುವೆಯೇ ಇದ್ದೂ ಸೃಜನ ಶೀಲತೆಯನ್ನು ಉಳಿಸಿಕೊಳ್ಳಬಹುದೆಂಬುದಕ್ಕೆ ಉದಾಹರಣೆಯಾಗಬಲ್ಲ ಬರಹ.

ರವೀಂದ್ರನಾಥ ಟಾಗೋರರ ಜೀವನ ದೃಷ್ಟಿ ಮತ್ತು ಚಿಂತನೆಗಳ ಬಗ್ಗೆ ಎರಡು ಪ್ರಬಂಧಗಳು, ಧಾರವಾಡದ ಬಗ್ಗೆ ಎರಡು ಪ್ರಬಂಧಗಳು, 'ಸೌಜನ್ಯ' 'ತಾಳ್ಮೆ,' 'ಸರಳತೆ,' 'ಓದುವ ಹವ್ಯಾಸ', 'ರಾಷ್ಟ್ರೀಯತೆ', 'ಶುಚಿಯಾದ ಮನಸ್ಸು', ಹೀಗೆ ಹಲವಾರು ವಿಷಯ ವ್ಯಾಪ್ತಿಯುಳ್ಳ ಚಿಕ್ಕ ಪ್ರಬಂಧಗಳೂ ಇವೆ. ಸಂಕಲನದ ಅತ್ಯುತ್ತಮ ಪ್ರಬಂಧವೆಂದರೆ "ಜೀವನದಲ್ಲಿ ಸೋಲು-ಗೆಲವು". ಪ್ರಬಂಧದ ಶೀರ್ಷಿಕೆಯಲ್ಲಿ "ಗೆಲವು" ಎಂಬ ಪದವಿದ್ದರೂ ಉದ್ದಕ್ಕೂ ಸೋಲಿನ ಮಹತ್ವವೇ ವರ್ಣಿತವಾಗಿದೆ. ಮೇಧಾವಿಗಳು, ಮಹಾತ್ಮರು, ಸೋಲನ್ನೇ ಗೆಲವಿನ ಮೆಟ್ಟಲೆಂದು ತಿಳಿದರು ಎಂಬುದನ್ನು ಸೋದಾಹರಣವಾಗಿ ವಿವರಿಸಿದೆ ಅಬ್ರಹಾಂ ಲಿಂಕನ್,

ಮಹಾತ್ಮಗಾಂಧಿ, ಬುದ್ಧ, ಬಸವ, ಲೂಯಿ ಪಾಶ್ಚರ್, ಮೇರಿಕ್ಯೂರಿ–ಇಂಥಾ ಮಹಾ ಚೇತನಗಳ ಹಿಂದೆ ಹೇಗೆ ಸೋಲೇ ಚೈತನ್ಯ ದಾಯಿಯಾಗಿ ಕೆಲಸ ಮಾಡಿತು ಎಂಬುದರ ಹೃದಯಂಗಮ ವಿವರಣೆ ಇದೆ, "ಸೋಲು ಮನುಷ್ಯನಲ್ಲಿ ಸುಪ್ತವಾಗಿದ್ದ ಮಾನಸಿಕ ಹಾಗೂ ದೈಹಿಕ ಹಾಗೂ ಸ್ಫೈರಣೆಯ ಶಕ್ತಿಗಳನ್ನು ಹೊರತರುತ್ತದೆ. ಅವನ ಶ್ರೇಷ್ಠ ಗುಣಗಳು ಹೊರಹೊಮ್ಮುತ್ತವೆ." ಇಂತಹ ತೂಕದ ಮಾತುಗಳು ಪ್ರಬಂಧಕ್ಕೆ ಗಾಂಭೀರ್ಯ ಕೊಟ್ಟಿವೆ. ಕುಲಪತಿಯಾಗಿ ತಮ್ಮ ಸ್ವಾನುಭವವನ್ನು ವಿವರಿಸಿರುವುದಂತೂ ಮೇಲಿನ ವಾಕ್ಯಕ್ಕೆ ವ್ಯಾಖ್ಯಾನ ಬರೆದಂತಿದೆ.

ಸಮಿತಿಗಳ ಕಾರ್ಯ ವೈಖರಿಯನ್ನು ಲಘು ಮನೋಭಾವದಲ್ಲಿ ಲೇವಡಿ ಮಾಡಿರುವ ಪ್ರಬಂಧ "ಸಮಿತಿಗಳು ಹಾಗೂ ಉಪ ಸಮಿತಿಗಳು". "ಸಮಿತಿಯಲ್ಲಿ ಇಬ್ಬರು ಸದಸ್ಯರಿದ್ದು ಒಬ್ಬನು ಬಾರದಿದ್ದರೆ ಅದೇ ಶ್ರೇಷ್ಠ ಸಮಿತಿ" ಎಂಬ ಇ. ವಿ. ಲ್ಯೂಕಸನ ಮಾತಂತೂ ಇಂದು ಸಮಿತಿಗಳು ಕಾರ್ಯನಿರ್ವಹಿಸುತ್ತಿರುವ ರೀತಿಗೆ ಕನ್ನಡಿ ಹಿಡಿದಂತಿದೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ 'ಪ್ರಬಂಧ' ಎಂಬ ಪ್ರಕಾರ ಅಷ್ಟೇನೂ ಜನಪ್ರಿಯವಾಗಿಲ್ಲದಿದ್ದ ಕಾಲದಲ್ಲಿ ಪ್ರಬಂಧ ರಚಿಸಲು ತೊಡಗಿದ ಸದಾಶಿವ ಒಡೆಯರರ ಬರವಣಿಗೆ ಅಂದು ಎಷ್ಟು ಚೇತೋಹಾರಿಯಾಗಿತ್ತೋ, 'ಪ್ರಬಂಧ' ಪ್ರಕಾರದಲ್ಲಿ ಹೆಚ್ಚು ಬರವಣಿಗೆಯಾಗುತ್ತಿರುವ ಇಂದೂ ಅಷ್ಟೇ ಚೇತೋಹಾರಿಯಾಗಿದೆ, ಸಾರ್ವಕಾಲಿಕ ಯೋಗ್ಯವಾಗಬಲ್ಲ ಬರವಣಿಗೆಯ ರೀತಿಯೇ ಇದು.

**ಎಸ್. ವಿ. ಪ್ರಭಾವತಿ**

## ಬಂಡಾಯ ಮನೋಧರ್ಮ : ಎಸ್. ವೆಂಕಟವಿಶ್ವನಾಥ

(ಪ್ರಜಾಸಾಹಿತ್ಯ ಪ್ರಕಾಶನ, ಬೆಂಗಳೂರು ೧೯೯೨.)

ಒಟ್ಟು ಒಂಭತ್ತು ಲೇಖನಗಳ ಸಂಗ್ರಹವಿದು. ಶೀರ್ಷಿಕೆಗಳೇ ಲೇಖಕನ ಆಸಕ್ತಿಯನ್ನರುಹುತ್ತವೆ. ಸಮಕಾಲೀನ ರಾಜಕೀಯ ಚಿಂತನೆಗಳನ್ನು ರೂಪಿಸಿದ ಪ್ರಮುಖ ವ್ಯಕ್ತಿಗಳಾದ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್‌ಗಳಷ್ಟೇ ಅಲ್ಲ ; ಹನ್ನೆರಡನೇ ಶತಮಾನದ ಸಮಾಜ ಚಿಂತಕ ಬಸವಣ್ಣನ ಕುರಿತು ಲೇಖನಗಳು ಇಲ್ಲಿವೆ ಜೊತೆಗೆ ಚಂಪಾ ಕುರಿತು, ಅನುಪಮಾ ನಿರಂಜನ ಕುರಿತು ಎರಡು ಲೇಖನಗಳಿವೆ. 'ಇಂದಿನ ಸಾಹಿತ್ಯ : ಮುಂದಿನ ಹೆಜ್ಜೆ' ಹಾಗೂ ಬಂಡಾಯ ಮನೋಧರ್ಮ' ಲೇಖನಗಳು

ಸಾತವಲ್ಲಿ ಅವರ ಸಾಹಿತ್ಯಿಕ ಚಿಂತನೆಗಳನ್ನು ಗ್ರಹಿಸಲು ಸಹಾಯ ಮಾಡುತ್ತವೆ. ಜೊತೆಗೆ 'ವರ್ಧಮಾನ ಪ್ರಶಸ್ತಿ ಸ್ವೀಕಾರ' ಎಂಬ ಸಾಂದರ್ಭಿಕವೂ ವೈಯಕ್ತಿಕವೂ ಆದ ಕಿರುಲೇಖನವೂ ಅನುಚಿತವಾಗಿ ಸೇರಿಕೊಂಡಿದೆ.

ಸಾತವಲ್ಲಿ ಅವರ ಬರಹಗಳನ್ನು ಗಮನಿಸಿದಾಗ ನನಗೆ ಅನಿಸಿದ್ದು ಅವರೊಬ್ಬ ವಿಮರ್ಶಕ ಎನ್ನುವುದಕ್ಕಿಂತಲೂ ಮಾತುಗಾರ ವೈಚಾರಿಕ ಹರಟೆಕೋರ ಎಂದು. ಇದು ಅವರ ಬರಹಗಳ ಒಟ್ಟು ಗುಣದೋಷವನ್ನು ಹೇಳುತ್ತದೆ. ಈ ಬರಹದ ಗುಣವೆಂದರೆ ಆತ್ಮೀಯ ಗೆಳೆಯನೊಬ್ಬನ ಜೊತೆಗೆ ಹರಟುವಾಗಿನ ಮುಕ್ತತೆ, ನಿಷ್ಕಪಟತೆ ಹಾಗೂ ನೇರತೆ. ಇದರಿಂದಾಗಿ ಒಂದು ಹಂತದ ವರಗೆ ಎಲ್ಲರನ್ನೂ ತಣಿಸಬಹುದು. ಸಾಧಾರಣ ಗ್ರಹಿಕೆಯ ಸಭ್ಯ ಓದುಗನಿಗೆ, ಸಹೃದಯನಿಗೆ ತೀರಾ ಇಷ್ಟವೂ ಆಗಬಹುದಾದುದು. ಆದರೆ, ವಿಮರ್ಶೆ ನಿರೀಕ್ಷಿಸುವ ಬೆದಕಾಟ, ಸ್ಥಾಪಿತ ಸತ್ಯಗಳನ್ನು ಪ್ರಶ್ನಿಸಿ ತನ್ನ ಪರಿಶೀಲನೆಗಳನ್ನು ಮಂಡಿಸಬಲ್ಲ ಛಾತಿ, ಮರು ಮೌಲ್ಯೀಕರಣಕ್ಕೆ ಬೇಕಾದ ವಿಸ್ತಾರವೂ ಆಳವೂ ಆದ ಚಿಂತನದ್ರವ್ಯ, ಬಹುಶ್ರುತತೆ, ಸ್ಪಷ್ಟ ಭಾಷೆ — ಇವೆಲ್ಲವೂ ಇಲ್ಲಿ ಅಷ್ಟಾಗಿ ಕಾಣದೆ ಹೋಗುವುದರಿಂದ ಗಂಭೀರವಾದ, ತಲಸ್ಪರ್ಶಿಯಾದ ಅಧ್ಯಯನ ಇಲ್ಲಿ ದೊರೆಯುವುದಿಲ್ಲ. ಹೆಚ್ಚಿನ ಬರಹಗಳು ಭಾಷಣಗಳೆಂದೇ ಓದಬೇಕಾದವು. ಇಷ್ಟಾಗಿಯೂ ಲೇಖಕರ ಸಹೃದಯೀ ಗ್ರಹಿಕೆ ಇತಿಹಾಸದ ಬೆಳವಣಿಗೆಗಳನ್ನು ಪ್ರಕ್ರಿಯಾತ್ಮಕವಾಗಿ ಗುರುತಿಸುವಂತಾದುದು ಮೆಚ್ಚುವಂತಿದೆ. ಉದಾ : ಬಂಡಾಯ ಹಾಗೂ ಪ್ರಗತಿಶೀಲರ ಸಂಬಂಧವನ್ನು ವಿಶ್ಲೇಷಿಸುವಲ್ಲಿ (ಪು. ೩೪ – ೩೫) ಈ ಗ್ರಹಿಕೆ ಮನಗಾಣುವಂತಿದೆ. ಈ ವಿಶ್ಲೇಷಣೆ ಇನ್ನಷ್ಟು ಆಳವೂ ಸಮಗ್ರಹವೂ ಆಗಿರುತ್ತಿದ್ದರೆ ಹಾಗೂ ಒಂದು ಸೈದ್ಧಾಂತಿಕ ಚೌಕಟ್ಟಿನಲ್ಲಿ ಮಂಡಿತವಾಗಿರುತ್ತಿದ್ದರೆ ಹೆಚ್ಚು ಉಪಾದೇಯವೆನಿಸುತ್ತಿತ್ತು.

ದಿನಪತ್ರಿಕೆಗಳಲ್ಲಿ ಅಂಕಣ ಬರೆಯುವವರ ಒಂದು ತೆವಲೆಂದರೆ, ಎಷ್ಟೇ ಕ್ಷುಲ್ಲಕವಾದ ಸಂಗತಿಯನ್ನೂ ಸುಲಭವಾಗಿ ಒಂದು ಲೇಖನವನ್ನಾಗಿಸಿ ಬಿಡುವುದು. ಜೊತೆಗೆ, ಸಾಮಾನ್ಯ ಓದುಗನಿಗೆ ವಸ್ತುವನ್ನು ಸುಲಭವಾಗಿ ತಲುಪಿಸಬೇಕೆಂಬುದಷ್ಟೇ (ಸಕಾಲಿಕವಾಗಿ!)ಅವರ ಗರಜಾಗಿರುವುದರಿಂದ, ಇಂಥವರ ಕೈಮನಸ್ಸುಗಳು ಇಂಥ ತೆವಲಿನಿಂದ ಯಾ ಗರಜಿನಿಂದ ನಿಯಂತ್ರಿತವಾಗಿ ಬಿಡುವುದು ; ಮತ್ತು ತಲಸ್ಪರ್ಶಿ ಅಧ್ಯಯನ ಮತ್ತು ವಿಶ್ಲೇಷಣೆಗೆ ಹಿಂದೆಗೆಯುವಂತಾಗುವುದು. 'ಅಂಬೇಡ್ಕರ ಮತ್ತು ಲೋಹಿಯಾ' ಲೇಖನ ಈ ಮಾತಿಗೆ ಸಾಕ್ಷಿ. 'ಚಂಪಾ: ವಿಚಾರಗಳು' ಲೇಖನದಲ್ಲಿ ಚಂಪಾರ ಕೊಡುಗೆ ಸಾಹಿತ್ಯದೊಂದಿಗೆ ಸಾಂಸ್ಕೃತಿಕ – ವೈಚಾರಿಕ ಕ್ಷೇತ್ರದಲ್ಲಿ ಎಷ್ಟು ಮಹತ್ವದೆಂದು ಗುರುತಿಸಿರುವುದು ಸ್ವಾಗತಾರ್ಹ. ಬೆಳವಣಿಗಳ ಹಿನ್ನೆಲೆಯಲ್ಲಿ ಚಂಪಾ ವ್ಯಕ್ತಿತ್ವ – ಕವಿತ್ವವನ್ನು ಬೆಲೆಗಟ್ಟುವ ಅಗತ್ಯ ಸಾತವಲ್ಲಿ ಅವರು ಕಂಡಿರುವು

ದಕ್ಕೆ ಖುಷಿಪಡುವಂತಾಗಿದೆ. ಇಲ್ಲಿ ಅವರು ಹೇಳುವ ಮಾತು ಚಿಂತನೀಯ : ... (ಅನಂತಮೂರ್ತಿ – ಲಂಕೇಶರಿಗೂ) ಚಂಪಾ ಅವರಿಗೂ ಇರುವ ಮೂಲಭೂತ ವ್ಯತ್ಯಾಸ : ಜನಪರ ಕಾಳಜಿ, ಚಳುವಳಿ ಹಾಗೂ ಸಕ್ರಿಯ ಸಂಬಂಧವದ್ದು. ಕೇವಲ, ಪ್ರತಿಭೆ, ಬುದ್ಧಿವಂತಿಕೆಗಳನ್ನು ಬಂಡವಾಳ ಮಾಡಿಕೊಂಡವರ ಒಲವು ನಿಲವು ಎಂದೂ ಸ್ವಾರ್ಥಮೂಲವಾದದ್ದು, ಚಲನಶೀಲ ರಹಿತವಾದದ್ದು, ಜೀವವಿರೋಧಿ ನೆಲೆಯದ್ದು. ಈ ಬಗೆಯ ಮುಂದುವರಿಕೆಯಾದ 'ಶೂದ್ರ' ಸಂಪಾದಕರ ಬರವಣಿಗೆ ಇದಕ್ಕೆ ಒಂದು ಕೆಟ್ಟ ಉದಾಹರಣೆ. ಒಳ್ಳೆಯ ಉದಾಹರಣೆ ಡಿ. ಆರ್ ನಾಗರಾಜ್. ಸತ್ಯವನ್ನು ಖಚಿತವಾಗಿ ಗ್ರಹಿಸಿ ಮುಖಕ್ಕೆ ರಾಚಿ ಹೇಳಬಲ್ಲ ಈ ಧೈರ್ಯ ಇಂದಿನ ವಿಮರ್ಶೆ ರೂಢಿಸಿಕೊಳ್ಳಲೇಬೇಕಾದುದು. ಈ ಧೈರ್ಯವನ್ನುಳಿಸಿಕೊಂಡು ಸಾತವಲ್ಲಿ ಅವರು ಇನ್ನಷ್ಟು ಮೂಲಭೂತವಾದ ಸತ್ಯಗಳನ್ನು ಸಮಾಜ – ಸಾಹಿತ್ಯಗಳ ಸಂಬಂಧದಲ್ಲಿ ಶೋಧಿಸಿ ಬರೆಯುವಂತಾಗಲಿ,

ಆರ್ಕೆ

## ಕಪ್ಪು ಕಣ್ಣಿನ ಹುಡುಗಿ : ಎಲ್. ಹನುಮಂತಯ್ಯ

(ಪಂಚಮ ಪ್ರಕಾಶನ, ಬೆಂಗಳೂರು)

ನೀವಿರುವ ಅರಮನೆಯ ಜಂತೆ ಜಂತೆಯು ನಾನು
ಉರಿವ ಬೆಳಕಿನ ಬಳ್ಳಿ ನನ್ನ ನರಗಳು ನಾನೆ
ನಿಮ್ಮಜ್ಜ ಅಪರಜ್ಜ ಆಳಿದರಮನೆ ತುಂಬ
ಆಳುಮಕ್ಕಳು ನೂರು ನಾವು ನಿಮ್ಮೊಳಗೆ.

ಎಲ್, ಹನುಮಂತಯ್ಯನವರ 'ಕಪ್ಪು ಕಣ್ಣಿನ ಹುಡುಗಿ' ಸಂಕಲನದ 'ನಾವು ನಿಮ್ಮೊಳಗೆ' ಕವಿತೆಯ ಮೇಲಿನ ಸಾಲುಗಳಿವು. ಬಂಡಾಯ ಕಾವ್ಯ ಒಂದು ದಶಕದ ನಂತರ ಮಗ್ಗಲು ಬದಲಿಸಿ, ಪ್ರತಿಭಟನೆಯ ಮೂಲ ಶಕ್ತಿಯನ್ನು ಅರಗಿಸಿಕೊಂಡು ಪ್ರಬುದ್ಧವಾಗಿ ಹೇಳುವ ಕಲಾತ್ಮಕ ಸ್ಪರ್ಶದ ಶೈಲಿಯ ಮಾದರಿ ಈ ಸಾಲುಗಳು.

ಈಗಾಗಲೇ ಬಂಡಾಯ ಚಳುವಳಿಯ ಮುಂಚೂಣಿ ಲೇಖಕರಲ್ಲಿ ಗುರುತಿಸಲ್ಪಡುವ ಕವಿ ಎಲ್. ಹನುಮಂತಯ್ಯ ಅವರ 'ಕಪ್ಪು ಕಣ್ಣಿನ ಹುಡುಗಿ' ಸಂಕಲನ ಬಂಡಾಯ ಚಳುವಳಿಯ ಅತ್ಯುತ್ತಮ ಎನ್ನಬಹುದಾದ ಸಂಕಲನಗಳಲ್ಲಿ ಒಂದೆನ್ನಬಹುದು.

ಎರಡು ಮುಖ್ಯ ಕಾರಣಗಳಿಗಾಗಿ ಈ ಸಂಕಲನ ಗಮನ ಸೆಳೆಯುತ್ತದೆ. ಗ್ರಾಮೀಣ ಸಂಸ್ಕೃತಿಯ ಹಿನ್ನೆಲೆಯ ಕೆಳ ವರ್ಗದಿಂದ ಬಂದ ಕವಿಯೊಬ್ಬ ಸೈದ್ಧಾಂತಿಕವಾಗಿ

ತನ್ನ ಎಲ್ಲವನ್ನು ಅರ್ಥೈಸಿಕೊಂಡು, ಅವಕ್ಕೊಂದು ನೋಟ ಕೊಡುವ ಸೃಜನಾತ್ಮಕ ಸೃಷ್ಟಿ ಕ್ರಿಯೆ ಈ ಕಾವ್ಯ ಕ್ರಿಯೆಯ ಹಿಂದೆ ಇರುವುದು ಮೊದಲ ಕಾರಣ.

ಆಪ್ತತೆ ಮತ್ತು ಬಹಿರಂಗ ವಾಸ್ತವೀಕರಣ ಸಮಾಕರಿಸುವುದು ಹನುಮಂತಯ್ಯ ಕಾವ್ಯದ ಇನ್ನೊಂದು ಗಮನಾರ್ಹ ಅಂಶ. ಕವಿ ಎಲ್ಲಿಯೂ ತನ್ನೊಳಗೆ ತಾನು ಮುಳುಗಿ ಹೋಗದೇ, ತನ್ನೆಲ್ಲ ಅನುಭವಗಳನ್ನು ಸಾರ್ವತ್ರಿಕಗೊಳಿಸುವ ಆಪ್ತತೆ ಮತ್ತು ಬಹಿರಂಗ ವಾಸ್ತವೀಕರಣಗೊಳಿಸುವ ಕ್ರಿಯಾ ವಿಧಾನ ಇಲ್ಲಿ ನಿಚ್ಚಳವಾಗಿ ಕಾಣುತ್ತೇವೆ.

ಚೆನ್ನಣ್ಣ ವಾಲೀಕಾರ, ಜಂಬಣ್ಣ ಅಮರಚಿಂತ, ಕನ್ನಡ ಕಾವ್ಯಕ್ಕೆ ಹೊಸ ಶಕ್ತಿ ತಂದು ಕೊಟ್ಟ ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಸತ್ಯಾನಂದ ಪಾತ್ರೋಟ, ಮುಂತಾದ ಪ್ರಮುಖ ದಲಿತ ಕವಿಗಳ ಜೊತೆಗೆ ಹನುಮಂತಯ್ಯ ತಮ್ಮ ಸ್ಪಷ್ಟ ಚೇತನೆ ಮತ್ತು ಸೃಜನಾತ್ಮಕ ಕಾರಣಗಳಿಗಾಗಿ ಸೇರುತ್ತಾರೆ.

ತೊಂಬತ್ತರ ದಶಕದಲ್ಲಿ ದಲಿತ ಬಂಡಾಯ ಕಾವ್ಯದ ಅಬ್ಬರ ಒಂದು ರೀತಿಯಲ್ಲಿ ಕಡಿಮೆ ಅನಿಸುತ್ತಿದ್ದರೂ ತುಂಬಿ ಹರಿಯುವ ಹೊಳೆಯ ರೀತಿಯಲ್ಲಿ ಕಾಣುವುದಕ್ಕೆ 'ಕಪ್ಪು ಕಣ್ಣಿನ ಹುಡುಗಿ' ಒಂದು ಉದಾಹರಣೆ ಆಗಬಲ್ಲದು.

'ನಾಗರದ ನಡುವೆ' ಕವಿತೆಯಲ್ಲಿ ತನ್ನ ಸುತ್ತಲಿಗೆ ಪ್ರತಿಕ್ರಿಯಿಸುತ್ತ 'ಅಕ್ಷರ ಅರಿವಿಗೆ ಜಾಥದ ಜಾತ್ರೆಗಳು : ಮುಂದಿನಾ ಸಾಲಿನಲಿ ಮುತ್ತೈದೆ ಮತ್ತವರೆ' ಎಂಬುವ ತೀಕ್ಷ್ಣ ಚುಚ್ಚುವ ವ್ಯಂಗ್ಯ ಕವಿ ಹಲವು ಕವಿತೆಗಳಲ್ಲಿ ಸಾಧಿಸಿದ್ದಾರೆ. ಮೆರವಣಿಗೆ, ಬಡವರ ನ್ಯಾಯ, ಭಾರತೀಪುರದ ವೀರರು, ಶಾಂತಿಗ್ರಾಮ, ದ್ರೋಣರಿದ್ದಾರೆ, ಹೃದಯಂಗಳು ಮಾರಾಟಕ್ಕಿವೆ, ಕನ್ನಡಮ್ಮನಿಗೆ, ಪಾರ್ಥೇನಿಯಂ, ಕಾರು ನಿಂತಲ್ಲೆ ನಿಂತಿದೆ, ಮುಂತಾದ ಕವಿತೆಗಳಲ್ಲಿ ಈ ತರಹದ ವ್ಯಂಗ್ಯ ಕಾಣುತ್ತೇವೆ.

ಇಲ್ಲಿ ಪ್ರಕಟಗೊಂಡ ವ್ಯಂಗ್ಯ ವಿಷಾದ ಆಳದ ತಿಳುವಳಿಕೆಯಿಂದ ಬಂದಂಥವದು. ತಟ್ಟನೆ ನಮ್ಮೆಲ್ಲ ಪರಂಪರೆಯನ್ನು ಕೆಣಕುವ ಶಕ್ತಿ ಈ ವ್ಯಂಗ್ಯಕ್ಕಿದ್ದು ಈ ಮಾತಿಗೆ 'ನ್ಯಾಯ' ಕವಿತೆಯ ಈ ಸಾಲುಗಳನ್ನು ನೋಡಬಹುದು,

> ಬಂಡೆ ಮೇಲ ಬಿಸಿಲಂತೆ, ಬೀದಿ ಮಗುವಿನಳುವಂತೆ
> ಬಿಕ್ಕಿ ಬಿಕ್ಕಿ ಅಳುತಲಿದೆ ಬಡವರ ನ್ಯಾಯ.
> ಬಂದೂಕದ ಬಾಯಿಯಲಿ ಕೊಲೆಗಡುಕರ ಕತ್ತಿಗಳಲಿ
> ಇಣುಕಿ ಹಾಕಿ ನಗುತಲಿತ್ತು ಬಡವರ ನ್ಯಾಯ.
> ಸರಳುಗಳ ಸಂಧಿಯೊಳಗೆ ಕಾಣುವ ಕೈಕೋಳದಲಿ
> ಬಿಡುಗಡೆಯನು ಬೇಡುತಿತ್ತು ಬಡವರ ನ್ಯಾಯ,

ಕರಿಕೋಟನು ಹುಡುಕಲಿದ್ದೆ, ಕತ್ತಲೆಯಲಿ ನೋಡುತಿದ್ದೆ,
ಕಟಕಟೆಯಲಿ ನಿಂತಿತ್ತು ಬಡವರ ನ್ಯಾಯ,
ಭೂಪಾಲದ ಅನಿಲದಲಿ ಬೆಂಡಿಗೇರಿ ಊರಿನಲ್ಲಿ
ಪ್ರೀತಿಗಾಗಿ ಬೇಡುತಿತ್ತು ಬಡವರ ನ್ಯಾಯ.

ಈ ಕವಿತೆಯು ಉದ್ದಕ್ಕೂ ಹೆಣೆದುಕೊಂಡಿರುವ ವ್ಯಂಗ್ಯ ವಿಷಾದ ಪ್ರಶ್ನೆಗಳು ಹನುಮಂತಯ್ಯನವರ ಕಾವ್ಯ ಸಾಮರ್ಥ್ಯವನ್ನು ತೋರಿಸುತ್ತದೆ.

ಈ ಸಂಕಲನದ ಪ್ರತಿ ಕವಿತೆ ಸಮರ್ಥವಾಗಿ, ಸಾರ್ಥಕವಾಗಿ ಬಿಗಿ ಬಂಧ ಪಡೆದು ಕಾವ್ಯಾನುಭವ ನೀಡುವುದು ಅತ್ಯಂತ ಪ್ರಮುಖ ಅಂಶ. ಯಾವುದೇ ಕವಿತೆಯ, ಯಾವುದೇ ಸಾಲು ಸುಮ್ಮನೆ ಹೊಸೆದೊಗೆದಂತಿಲ್ಲ. ಹನುಮಂತಯ್ಯ ತಾವೊಬ್ಬ ಸಮರ್ಥ ಕವಿ ಎಂದು 'ಕಪ್ಪು ಕಣ್ಣಿನ ಹುಡುಗಿ' ಮೂಲಕ ಸಿದ್ಧಮಾಡಿದ್ದಾರೆ.

'ಕಪ್ಪು ಕಣ್ಣಿನ ಹುಡುಗಿ' ಕವಿತೆಯ ಕೊನೆಯ ಸಾಲುಗಳು ಈ ರೀತಿ ಇವೆ.

'ನೋವು ನುಂಗುವ ಜನರು
ನಗುವ ಚಂದಿರನೊಡನೆ,
ಕೆಂಪು ಸೂರ್ಯನ ಕಂಡರು'

'ನೋವು ನುಂಗುವ ಜನ' ಪ್ರಕೃತಿಯಲ್ಲಿ ಹೊಂದಿದ ತಾದ್ಯಾತ್ಮ ಮತ್ತು ಅದೇ ಪ್ರಕೃತಿಯ ಮೂಲಕ ಪಡೆಯುವ 'ಕೆಂಪು ಸೂರ್ಯನ' ಚೇತನ ಒಟ್ಟು ಹನುಮಂತಯ್ಯ ಕಾವ್ಯದ ಸೃಜನಾತ್ಮಕ ಗಟ್ಟಿ.

ಮೂಕ ನಾಯಕನಿಗೆ, ಆ ಹುಡುಗ, ಊರಿಗೊಂದು ಪತ್ರ, ಕಪ್ಪು ಕಣ್ಣಿನ ಹುಡುಗಿ, ಬಡವರ ನ್ಯಾಯ, ಅಪ್ಪ, ಬೆಂಗಳೂರು, ಮುಂತಾದ ಕವಿತೆಗಳು ಬಿಡಿ ಬಿಡಿಯಾಗಿ ಪೂರ್ಣ ಪ್ರಮಾಣದ ವಿಮರ್ಶೆ ಬೇಡುವ ಕವಿತೆಗಳು. ನಿರ್ಣಾಯಕವಾಗಿ ಬದಲಾಗುತ್ತಿರುವ ಬಂಡಾಯ ಕಾವ್ಯದ ದಿಟ್ಟ ಸಂಕೇತ ಈ ಸಂಕಲನಕ್ಕಿದೆ.

**ಸತೀಶ ಕುಲಕರ್ಣಿ**

## ವಚನ ಚಳವಳಿ : ಬಸವರಾಜ ಸಬರದ

**(ಪಲ್ಲವಿ ಪ್ರಕಾಶನ, ಗುಲಬರ್ಗಾ, ೧೯೮೨)**

ಡಾ॥ ಬಸವರಾಜ ಸಬರದ ಅವರ 'ವಚನ ಚಳವಳಿ' ಹದಿನಾಲ್ಕು ವಿಮರ್ಶಾ ಪ್ರಬಂಧಗಳನ್ನೊಳಗೊಂಡ ಒಂದು ಗಮನಾರ್ಹ ಕೃತಿ. ಹನ್ನೆರಡನೇ ಶತಮಾನದಲ್ಲಿ ಕರ್ನಾಟಕದ ಜನಜೀವನದಲ್ಲಿ ಒಂದು ಹೊಸ ಅಲೆಯನ್ನು ಸೃಷ್ಟಿಸಿದ ಶಿವಶರಣರ

ಮತ್ತು ಅವರ ವಚನಗಳ ವಿವೇಚನೆ ಈ ಕೃತಿಯಲ್ಲಿದೆ. ಇಲ್ಲಿ ಸಂಕಲನಗೊಂಡಿರುವ ಹದಿನಾಲ್ಕು ಪ್ರಬಂಧಗಳನ್ನು ಎರಡು ಭಾಗಗಳಾಗಿ ವರ್ಗೀಕರಿಸಲಾಗಿದೆ. ಮೊದಲ ಭಾಗದಲ್ಲಿ 'ವಚನ ಚಳವಳಿ–ಒಂದು ಒಳನೋಟ', 'ಅನುಭವ ಮಂಟಪ ಮತ್ತು ವ್ಯಕ್ತಿತ್ವ ವಿಕಾಸ', 'ವಚನ ಸಾಹಿತ್ಯದಲ್ಲಿ ವೈಚಾರಿಕತೆ', 'ಶರಣರ ಕಾಯಕದ ಪರಿಕಲ್ಪನೆ', 'ವಚನಕಾರರು ಮತ್ತು ಬಂಡಾಯ ಪ್ರಜ್ಞೆ', 'ಶರಣರ ಕ್ರಾಂತಿಯ ಸಫಲತೆ–ವಿಫಲತೆ : ಒಂದು ವಿವೇಚನೆ', 'ಶಿವಶರಣೆಯರ ವಚನಗಳಲ್ಲಿ ಸ್ವಾಭಿಮಾನ' ಎಂಬ ಏಳು ಪ್ರಬಂಧಗಳಿವೆ. ಎರಡನೆಯ ಭಾಗದಲ್ಲಿ 'ಅಲ್ಲಮಪ್ರಭು-ಮುಕ್ತಾಯಕ್ಕ-ಮಹಾದೇವಿಯಕ್ಕಗಳ ವಚನಗಳಲ್ಲಿ ಸೈದ್ಧಾಂತಿಕ ಚರ್ಚೆ', 'ಚನ್ನಬಸವಣ್ಣನ ವಚನಗಳಲ್ಲಿ ತಾತ್ತ್ವಿಕ ನೆಲೆ', 'ಅಕ್ಕಮಹಾದೇವಿಯ ವಚನಗಳಲ್ಲಿ ಪ್ರಕೃತಿ', 'ಸಿದ್ಧರಾಮನ ವಚನಗಳಲ್ಲಿ ಸಮಾಜ ವಿಮರ್ಶೆ,' 'ಅಂಬಿಗರ ಚೌಡಯ್ಯನ ವಚನಗಳಲ್ಲಿ ಪರಂಪರೆ ಮತ್ತು ಪ್ರಯೋಗತತ್ತ್ವ', 'ದೇವರ ದಾಸಿಮಯ್ಯನ ವಚನಗಳಲ್ಲಿ ಪ್ರತಿಮಾ ವಿಧಾನ', 'ಬಸವಣ್ಣ ಮತ್ತು ಪ್ರಸ್ತುತ ಸಾಮಾಜಿಕ ಸಂದರ್ಭ' ಎಂಬ ಇನ್ನೇಳು ಪ್ರಬಂಧಗಳು ಸಂಕಲನಗೊಂಡಿವೆ. ಇನ್ನೂರು ಪುಟಗಳ ಈ ಪುಸ್ತಕ ಆಕರ್ಷಕ ರಕ್ಷಾಕವಚದೊಡನೆ ಅಚ್ಚುಕಟ್ಟಾದ ಮುದ್ರಣದಲ್ಲಿ ಪ್ರಕಟಗೊಂಡಿದೆ. ಡಾ॥ ಎಂ. ಚಿದಾನಂದಮೂರ್ತಿ, ಜಿ. ಎಸ್. ಸಿದ್ಧಲಿಂಗಯ್ಯ ಹಾಗೂ ಎಚ್. ಎಸ್. ಶಿವಪ್ರಕಾಶ–ಇವರ ಸಮುಚಿತವಾದ ಅಭಿಪ್ರಾಯಗಳನ್ನೂ ಅಳವಡಿಸಲಾಗಿದೆ.

ಮೊದಲ ಭಾಗದ ಪ್ರಬಂಧಗಳಲ್ಲಿ ವಚನಕಾರರ ಬದುಕು ಮತ್ತು ಬರೆಹದ ಸಮಷ್ಟಿ ಸ್ವರೂಪದ ವಿವೇಚನೆ ಇದೆ. ಸ್ವಾಭಿಮಾನ, ವೈಚಾರಿಕತೆ, ಚಳವಳಿ, ಬಂಡಾಯ ಇಂತಹ ಮಾತುಗಳು ಇಲ್ಲಿನ ಲೇಖನಗಳ ಶೀರ್ಷಿಕೆಯಲ್ಲಿಯೇ ಕಂಡು ಬರುವುದು ವಚನಸಾಹಿತ್ಯದಲ್ಲಿ ವ್ಯಕ್ತವಾಗುವ ಪ್ರತಿಭಟನಾಂಶಗಳನ್ನು ಪ್ರಮುಖವಾಗಿ ಗುರುತಿಸಲು ಹೊರಟಿರುವುದನ್ನು ಸ್ಪಷ್ಟಪಡಿಸುತ್ತದೆ. ಇಂದಿನ ಸಾಹಿತ್ಯಕ ತಿರುವುಗಳಲ್ಲಿ ಒಂದಾದ 'ಬಂಡಾಯ'ದ ಸೈದ್ಧಾಂತಿಕ ನಿಲುವುಗಳಿಂದ ಪ್ರೇರಿತವಾದ ವಿಮರ್ಶಾ ಪ್ರಜ್ಞೆ ಇಲ್ಲಿನ ವಿವೇಚನೆಯಲ್ಲಿ ಕೆಲಸ ಮಾಡಿರುವುದು ನಿಜವಾದರೂ, 'ಇವತ್ತಿನ ಸಂದರ್ಭದಲ್ಲಿ ನಿಂತು "ಅವರು ಹಾಗೇಕೆ ಮಾಡಲಿಲ್ಲ?" ಎಂದು ಪ್ರಶ್ನಿಸುವುದೂ ಸರಿಯಲ್ಲ' (ಪು.೬) ಎಂದು ಎಚ್ಚರ ವಹಿಸಿರುವುದು ಸಮಂಜಸವಾಗಿದೆ. ಈ ಎಚ್ಚರದಿಂದಾಗಿ ಇಲ್ಲಿನ ಪ್ರಬಂಧಗಳು ಅಂದಿನ ಇತಿ-ಮಿತಿಗಳನ್ನು ಗುರುತಿಸುವಾಗ ಆವೇಗ ಪೂರ್ಣ ಅತಿರೇಕಗಳನ್ನು ತಲುಪದೆ ಸಂಯಮವನ್ನು ಸಾಧಿಸುವಲ್ಲಿ ಸಫಲವಾಗಿವೆ. 'ಬಂಡಾಯವೆಂದರೆ ಬಡಿ–ಕಡಿ–ಹೊಡಿ ಎಂದರ್ಥವಲ್ಲ. ನಿಜವಾದ ಬಂಡಾಯ ದಯೆಯ ಹೊಟ್ಟೆಯಲ್ಲಿ ಹುಟ್ಟುತ್ತದೆ, ಮಾನವೀಯತೆಯ ಹೃದಯದಲ್ಲಿ ಅರಳುತ್ತದೆ. ಸಮಾನತೆಯ ಸಮಾಜವನ್ನು ಕಟ್ಟಿ ನಿಲ್ಲಿಸುತ್ತದೆ' (ಪು.೪೭) ಎನ್ನುವ ಸಬರದ

ಅವರು 'ಬಂಡಾಯ'ದ ಪರಿಕಲ್ಪನೆಯನ್ನು ಒಂದು ಆರೋಗ್ಯಪೂರ್ಣ ನೆಲೆಯಲ್ಲಿ ರೂಪಿಸಿಕೊಂಡಿರುವುದು ಆಶಾದಾಯಕ ಸಂಗತಿಯೇ ಸರಿ.

ಇಂತಹ ಒಂದು ಮನಃಸ್ಥಿತಿಯಲ್ಲಿ ವಚನ ಸಾಹಿತ್ಯದ ವಿಶ್ಲೇಷಣೆಗೆ ಹೊರಟಿರುವ ಇಲ್ಲಿನ ಪ್ರಬಂಧಗಳಲ್ಲಿ ಆ ಕುರಿತ ವಿಮರ್ಶೆಗೆ ಒಂದು ಹೊಸ ಆಯಾಮವನ್ನು ಸೃಷ್ಟಿಸುವ ತುಡಿತ ಇದೆ. ಅಂತಲೇ ಕಾರ್ಲ್‌ಮಾರ್ಕ್ಸ್‌ನ ಉಲ್ಲೇಖ ಅಲ್ಲಲ್ಲಿ ಬರುತ್ತದೆ. ಮಾರ್ಕ್ಸ್‌ನ ಸಿದ್ಧಾಂತದ ಹಿನ್ನೆಲೆಯಲ್ಲಿ ವಚನಕಾರರ ಚಳುವಳಿಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಆರ್ಥಿಕ ಮತ್ತು ಸಾಮಾಜಿಕ ಅಸಮ ತೋಲನದ ವಿರುದ್ಧವಾದ ಮಾರ್ಕ್ಸ್‌ನ ಸಿದ್ಧಾಂತವನ್ನು ವಚನ ಚಳುವಳಿ ಹಲವಂಶಗಳಲ್ಲಿ ಹೋಲುತ್ತದೆ ಎನ್ನುತ್ತಾರೆ ಸಬರದ ಜೊತೆಗೆ ಆ ಸಿದ್ಧಾಂತದ ಸಾಫಲ್ಯತೆಯನ್ನು ಈ ಚಳುವಳಿ ಸಾಧಿಸದೇ ಹೋದುದಕ್ಕೆ ಕಾರಣಗಳನ್ನೂ ಗುರುತಿಸಿದ್ದಾರೆ ವಚನಕಾರರ ಧಾರ್ಮಿಕ ಉದ್ದೇಶವನ್ನೂ, ಅವರು ರಾಜಕೀಯದಿಂದ ದೂರವಿದ್ದುದನ್ನೂ ಕಾರಣವಾಗಿ ಸೂಚಿಸಿದ್ದಾರೆ (ನೋಡಿ: ವಚನ ಚಳವಳಿ–ಒಂದು ಒಳನೋಟ.) ಜನಪರವಾದ ತಮ್ಮ ನಿಲುವುಗಳ ಸ್ಥಾಪನೆಗಾಗಿ ಧರ್ಮದ ಕಟ್ಟುಪಾಡುಗಳನ್ನು ಸಡಿಲಗೊಳಿಸಿ ಆಧ್ಯಾತ್ಮವನ್ನು ಸಾರ್ವತ್ರೀಕರಿಸುವ ದಿಟ್ಟ ಹೆಜ್ಜೆ ಇಟ್ಟವರು ವಚನಕಾರರು. 'ವಚನಕಾರರು ಇಂತಹ ಸಂದಿಗ್ಧ ಸಂದರ್ಭದಲ್ಲಿ ಧರ್ಮದ ಮುಖಾಂತರ ಮಾತನಾಡುವುದು ಅನಿವಾರ್ಯವಾಗಿತ್ತು. ಹೀಗಾಗಿ ಅವರು ಧರ್ಮ ದೇವರುಗಳ ವ್ಯಾಖ್ಯೆಯನ್ನೇ ಬದಲಾಯಿಸಿದರು. ಅವರ ಕಾಲಕ್ಕೆ ಧರ್ಮ–ದಯೆಯಾಯಿತು. ಕರ್ಮ-ಕ್ರಿಯೆಯಾಯಿತು ದಯೆಯೇ ಧರ್ಮದ ಮೂಲವಾಯಿತು.' (ವಚನ ಸಾಹಿತ್ಯದಲ್ಲಿ ವೈಚಾರಿಕತೆ ಪು. ೨೯) ಎನ್ನುವ ಸಬರದ ಅವರಿಗೆ ಈ ಸೂಕ್ಷ್ಮ ಗೊತ್ತಿಲ್ಲದೇ ಇಲ್ಲ. ನಮ್ಮ ವಚನಗಳ ಸಾಹಿತ್ಯದಲ್ಲಿ ವ್ಯಕ್ತವಾಗುವ ಇಂತಹ ನಿಲುವುಗಳನ್ನು ಇಟ್ಟುಕೊಂಡು ಮಾರ್ಕ್ಸ್‌ವಾದದ ಮಿತಿಗಳನ್ನು ಗುರುತಿಸುವುದು ಅಪೇಕ್ಷಣೀಯವೆನಿಸುತ್ತದೆ. ಮಾರ್ಕ್ಸ್‌ವಾದದ ಸಫಲತೆ ವಿಫಲತೆಯ ಮಾತಾಡುತ್ತಿರುವ ಈ ಸಂದರ್ಭದಲ್ಲಿ ಇಂತಹ ವಿವೇಚನೆ ಪ್ರಸ್ತುತವಾಗಬಲ್ಲುದು. ವಚನಕಾರರು ರೂಪಿಸಿದ ಕಾಯಕತತ್ತ್ವ ಮತ್ತು ದಾಸೋಹ ಪದ್ಧತಿಗಳಲ್ಲಿ ಸಮತಾವಾದದ ಆದರ್ಶಗಳನ್ನು ಕಾಣುವ ಪ್ರಯತ್ನ ನಡೆದಿರುವುದು ಇಲ್ಲಿನ ಪ್ರಮುಖ ಅಂಶಗಳಲ್ಲಿ ಒಂದು. ಇಂತಹ ಪ್ರಯತ್ನಗಳಿಂದ ಇಲ್ಲಿನ ವಿವೇಚನೆಗೆ ಹೊಸ ಆಯಾಮ ದೊರೆತಂತಾಗಿದೆ. ಈ ಆಯಾಮದಲ್ಲಿ ವಚನ ಸಾಹಿತ್ಯದ ವಿವೇಚನೆ ಮತ್ತಷ್ಟು ಸೂಕ್ಷ್ಮವೂ ವ್ಯಾಪಕವೂ ಆದ ರೀತಿಯಲ್ಲಿ ನಡೆಯಬೇಕಾದ ಅಗತ್ಯವಿದೆ.

'ವಚನ ಚಳವಳಿ'ಯ ಮೊದಲ ಭಾಗದ ಪ್ರಬಂಧಗಳಲ್ಲಿ ವಚನಕಾರರ ಬದುಕು ಮತ್ತು ಬರೆಹದ ಸಮಷ್ಟಿ ಸ್ವರೂಪದ ವಿವೇಚನೆಯಿದೆ ಎಂದು ಮೊದಲೇ ಹೇಳಿದೆ.

ಲೇಖಕರ ಈ ಸಮಷ್ಟಿ ಗ್ರಾಹ್ಯತೆ ಅಲ್ಲಲ್ಲಿ ಸಡಿಲಗೊಂಡ ಅನುಭವವನ್ನುಂಟುಮಾಡು ವುದು ಈ ಪ್ರಬಂಧಗಳ ಒಂದು ಮಿತಿ. ಈ ಕೊರತೆ ಒಡೆದು ಕಾಣುವುದು 'ವಚನ ಕಾರರು ಮತ್ತು ಬಂಡಾಯ ಪಜ್ಞೆ' ಎಂಬ ಪ್ರಬಂಧದಲ್ಲಿ ಕೆಲವರು ಪ್ರಸಿದ್ಧ ಮತ್ತು ಅಪ್ರಸಿದ್ಧ ವಚನಕಾರರು ಹಾಗೂ ವಚನಕಾರ್ತಿಯರನ್ನು ಬಿಡಿಬಿಡಿಯಾಗಿ ತೆಗೆದು ಕೊಂಡು ಅವರ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನಾಂಶಗಳನ್ನು ಗುರುತಿಸುವ ಪ್ರಯತ್ನ ಇಲ್ಲಿ ನಡೆದಿದೆ. ಹೀಗೆ ವ್ಯಷ್ಟಿನೆಲೆಯಿಂದ ಹೊರಟ ಈ ವಿವೇಚನೆ ಇದ್ದಕ್ಕಿದ್ದಂತೆ ಅಂತ್ಯವನ್ನು ಪಡೆದುಕೊಳ್ಳುತ್ತದೆ. ವ್ಯಷ್ಟಿ ನೆಲೆಯಲ್ಲಿ ರೂಪಿತವಾದ ಅಭಿಪ್ರಾಯಗಳು ಸಮಷ್ಟಿ ನೆಲೆಗೆ ನುಲಿದುಕೊಂಡದ್ದರ ಕಡುಪು ಈ ಪ್ರಬಂಧದಲ್ಲಿ ಸಾಧಿತವಾಗುವುದಿಲ್ಲ. ಪ್ರಾರಂಭದಲ್ಲಿ ಇಂತಹ ಕೊಂಚಮಟ್ಟಿನ ಪ್ರಯತ್ನ ಇದೆ ಯಾದರೂ ಅಂತಿಮ ಪರಿಣಾಮದಲ್ಲಿ ತನ್ನನ್ನು ಸ್ಥಿರಪಡಿಸಿಕೊಳ್ಳುವುದಿಲ್ಲವಾದ್ದರಿಂದ ಪೀಠಿಕಾ ರೂಪದಲ್ಲಿ ಕಂಡುಬಂದ ಇಲ್ಲಿನ ಸಮಷ್ಟಿಗ್ರಾಹ್ಯತೆ ಅಂತಿಮ ಪರಿಣಾ ಮದಲ್ಲಿ ಸೋಲುತ್ತದೆ. ಇಡೀ ಕೃತಿಯಲ್ಲಿ ಕಾಣಸಿಗುವ ವಚನಕಾರರ ಮತ್ತು ವಚನಗಳ ಉಲ್ಲೇಖದ ಬಾಹುಳ್ಯ ಹಾಗೂ ಅಭಿಪ್ರಾಯಗಳನ್ನು ತಳೆಯುವಲ್ಲಿನ ಅಧಿಕೃತತೆ ವಚನ ಸಾಹಿತ್ಯದ ಬಗೆಗೆ ಲೇಖಕರಿಗಿರುವ ವ್ಯಾಪಕವಾದ ತಿಳಿವು ಮತ್ತು ಪರಿಶ್ರಮವನ್ನು ದೃಢಪಡಿಸುತ್ತವೆ. ಹೀಗಿದ್ದೂ ಇಲ್ಲಿನ ಸಮಷ್ಟಿಗ್ರಾಹ್ಯತೆ ತನ್ನ ಬಿಗುವನ್ನು ಸಡಿಲಗೊಳಿಸಿಕೊಳ್ಳುವುದು ಕುತೂಹಲ ಸಂಗತಿಯಾಗಿದೆ.

ಎರಡನೇ ಭಾಗದ ಪ್ರಬಂಧಗಳು ಕೂಡ ಮೊದಲನೇ ಭಾಗದ ಪ್ರಬಂಧಗಳಲ್ಲಿ ಬಳಕೆ ಯಾದ ದೃಷ್ಟಿಕೋನದ ಚಿಂತನೆಯಿಂದ ಕೂಡಿವೆ. ವ್ಯತ್ಯಾಸವಿಷ್ಟೆ: ಈ ಪ್ರಬಂಧಗಳು ನಿರ್ದಿಷ್ಟ ವಚನಕಾರನೊಬ್ಬನ ಇಲ್ಲವೇ ವಚನಕಾರ್ತಿಯೊಬ್ಬಳ ವಚನಗಳಲ್ಲಿ ವ್ಯಕ್ತ ಗೊಂಡ ಉದ್ದೇಶಿತ ವಸ್ತುವಿನ ವಿವೇಚನೆ ನಡೆಸುತ್ತವೆ; ಅಕ್ಕಮಹಾದೇವಿಯ ವಚನಗಳಲ್ಲಿ ಬರುವ ಪ್ರಕೃತಿ ವಿಚಾರ, ಸಿದ್ಧರಾಮನ ವಚನಗಳಲ್ಲಿ ಕಾಣಸಿಕೊಳ್ಳುವ ಸಮಾಜ ವಿಮರ್ಶೆ,...ಹೀಗೆ. ಸಿದ್ಧರಾಮನ ಬದುಕಿನಲ್ಲಿ ಕರ್ಮಯೋಗ ಮತ್ತು ಶಿವಯೋಗ ಎಂಬ ಎರಡು ಹಂತಗಳನ್ನು ಗುರುತಿಸಿರುವುದು ಹೊಸದಲ್ಲದಿದ್ದರೂ ಸಮಂಜಸವಾಗಿದೆ ದಾಸಿಮಯ್ಯ ತನ್ನ ವಚನಗಳಲ್ಲಿ ಎತ್ತುವ ಹಸಿವಿನಂತಹ ಕಟುವಾಸ್ತವ ಸಂಗತಿಯನ್ನು ಮಾರ್ಕ್ಸ್‌ವಾದದೊಡನೆ ಸಮೀಕರಿಸಿ ವಿಚಾರಮಾಡಿ ರುವುದು ಹೊಸ ಚರ್ಚೆಗೆ ದಾರಿಮಾಡಿಕೊಡುತ್ತದೆ. ಸಮಕಾಲೀನ ಸಮಾಜದ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಬಸವಣ್ಣನ ವಚನಗಳಲ್ಲಿ ದೊರೆಯಬಹು ದಾದ ಪರಿಹಾರಗಳನ್ನು ಅನ್ವೇಷಿಸಲು ಹೊರಟಿರುವುದು ಅಪೇಕ್ಷಣೀಯ ಕಾರ್ಯ ವೊಂದನ್ನು ನಿರ್ವಹಿಸುವ ಜವಾಬ್ದಾರಿಯನ್ನು ಪೂರೈಸುತ್ತದೆ.

'ವಚನ ಚಳವಳಿ' ಒಂದು ಉಪಯುಕ್ತ ಕೃತಿ. ತನ್ನ ಮಿತಿಗಳ ನಡುವೆಯೂ ಹೊಸ ಹೊಳಪು ಬೀರುವಂತಹುದು. ವಚನ ಸಾಹಿತ್ಯದ ವಿವೇಚನೆಯ ಸಂದರ್ಭದಲ್ಲಿ

ಪರಾಮರ್ಶಿಸಬೇಕಾದುದು. ಈಗಾಗಲೇ ಕವಿಗಳೆಂದೂ ವಿಮರ್ಶಕರೆಂದೂ ಬಂಡಾಯ ಸಾಹಿತ್ಯ ಚಳುವಳಿಯೊಡನೆ ತಮ್ಮನ್ನು ಗುರುತಿಸಿಕೊಂಡಿರುವ ಡಾ॥ ಬಸವರಾಜ ಸಬರದ ಅವರ ಈ ಕೃತಿ ವಚನ ಸಾಹಿತ್ಯದ ಬಗೆಗಿನ ಅವರ ವಿಸ್ತಾರವಾದ ಅಭ್ಯಾಸದ ಸೂಚಕವಾಗಿದೆ.

**ಜೋಗಿಗೌಡ ಚಿಕ್ಕಮರಳಿ**

## ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ : ಟಿ. ಪಿ. ಅಶೋಕ

ಕರ್ನಾಟಕ ಸಂಘ ಪುತ್ತೂರು

ಕಾರಂತರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧದ ಕುರಿತು ಈಗಾಗಲೇ ಬರೆದ ಟಿ. ಪಿ. ಅಶೋಕರು ಈ ಪುಸ್ತಕದಲ್ಲಿ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆಯನ್ನು ವಿವರಿಸಿದ್ದಾರೆ.

ಸಾಹಿತ್ಯ ವಿಮರ್ಶೆಯಲ್ಲಿ ಆಧುನಿಕತೆಯ ಕುರಿತ ಚರ್ಚೆಯು ಒಂದು ಪರಿಭಾಷೆಯಾಗಿದ್ದು. ಪಾಶ್ಚಿಮಾತ್ಯ ವಿಮರ್ಶೆಯ ಜಗತ್ತಿನಲ್ಲಿ ಅದಕ್ಕೊಂದು ಸ್ಥಾನವು ಪರಿಕಲ್ಪಿತವಾಗಿದೆ ಆಧುನಿಕತೆಯ ಬಗೆಗೆ ಬರೆದ ವಿಮರ್ಶಕರು ಅದಕ್ಕೊಂದು ತಾತ್ವಿಕ, ಸಾಮಾಜಿಕ, ಆರ್ಥಿಕ ಪ್ರಸಕ್ತಿಗಳನ್ನು ಪರಿಗ್ರಹಿಸಿದ್ದಾರೆ. ಆಧುನಿಕತೆಯ ಪರಿಕಲ್ಪನೆಯಲ್ಲಿ 'ಈಚಿನ' 'ಹೊಸತು' ಎನ್ನುವ ಅಂಶವು ಅಂತಸ್ಥವಾಗಿರುತ್ತದೆ. ಆಧುನೀಕರಣದ ಪ್ರಕ್ರಿಯೆ ಸಾಹಿತ್ಯದ ಸಂದರ್ಭದಲ್ಲಿ ನಮ್ಮಕ್ಕೆ ಸಮೀಕರಿಸಿರುವ ಪ್ರಸಂಗಗಳು ಕೂಡಾ ಇವೆ ಈ ದೃಷ್ಟಿಯಿಂದ ಆಧುನಿಕತೆಯನ್ನು ಮೊದಲಿಗೆ ವ್ಯಾಖ್ಯಾನಿಸದೆ ಮುಂದಕ್ಕೆ ಹೊರಡುವುದು ಕಷ್ಟ. ಟಿ. ಪಿ. ಅಶೋಕ ಅವರು ಆಧುನಿಕತೆಯನ್ನು ಕರ್ನಾಟಕ ಸಂಸ್ಕೃತಿಗೆ ಅನ್ವಯಿಸುವಾಗ ವಸಾಹತು ಶಾಹಿ ಆಡಳಿತವನ್ನು ಗಣನೆಗೆ ತಂದುಕೊಂಡಿದ್ದಾರೆ (ಪು. ೫.) ಎರಡನೆಯದಾಗಿ ಆಧುನಿಕತೆಯ ಜೊತೆಗೆ ಇರುವ ಸಾಂಸ್ಕೃತಿಕ ತಲ್ಲಣವನ್ನು ಗುರುತಿಸಿದ್ದಾರೆ (ಪು. ೮) ಈ ಎರಡು ಅಂಶಗಳು ಅಶೋಕ ಅವರ ಮುಖ್ಯ ನಿಲುವನ್ನು ಎತ್ತಿ ತೋರಿಸುತ್ತದೆ. ಟಿ. ಪಿ. ಅಶೋಕ ಅವರು ಚರ್ಚಿಸಿರುವ ನೆಲೆಗಳನ್ನು ಈ ರೀತಿಯಲ್ಲಿ ಗುರುತಿಸಬಹುದು: ಮೊದಲನೆಯದಾಗಿ ಆಧುನಿಕತೆಯು ಸಾಂಪ್ರದಾಯಿಕ ಸಮಾಜದ ಮೇಲೆ ಉಂಟು ಮಾಡುವ ತಲ್ಲಣ. ಎರಡನೆಯದಾಗಿ, ಉತ್ಪಾದನಾ ಸಂಬಂಧದ ಮೇಲೆ ಉಂಟು ಮಾಡುವ

ಪ್ರಭಾವ. ಆದರೆ, ಈ ಪುಸ್ತಕದಲ್ಲಿ ಸಾಂಸ್ಕೃತಿಕ ಮುಖಾಮುಖಿಗೆ ಹೆಚ್ಚಿನ ಒತ್ತನ್ನು ಕೊಡಲಾಗಿದೆ. ಉತ್ಪಾದನಾ ಸಂಬಂಧದ ವ್ಯಾಪ್ತಿ ಕುರಿತು ಹೆಚ್ಚು ಒತ್ತನ್ನು ಕೊಟ್ಟ ಹಾಗೆ ಕಾಣುವುದಿಲ್ಲ.

ಅಲ್ಲಲ್ಲಿ ತಮ್ಮ ಚರ್ಚೆಗೆ ಪೂರಕವಾಗಿ ತೌಲನಿಕ ಅಧ್ಯಯನ ಕ್ರಮವನ್ನು ಕೂಡಾ ಅಶೋಕ ಅವರು ಅಳವಡಿಸಿಕೊಂಡಿದ್ದಾರೆ. ಕಾರಂತರಿಗೂ ಮಾಸ್ತಿಯವರಿಗೂ (ಪು.೧೫) ಕಾರಂತರಿಗೂ ಚಿನುವ ಅಚಿಬೆಯುವರಿಗೂ (ಪು.೧೬) ನಡೆಸಿರುವ ತೌಲನಿಕ ಚರ್ಚೆಯೂ ಅಷ್ಟೊಂದು ಸಮಂಜಸವೆನಿಸುವುದಿಲ್ಲ. ತೌಲನಿಕ ಅಧ್ಯಯನ ಕ್ರಮವು ಅನೇಕ ಸೂಕ್ಷ್ಮತೆಗಳನ್ನು ಕಳೆದುಕೊಳ್ಳುತ್ತದೆ. ಮುಖ್ಯವಾಗಿ ಚಾರಿತ್ರಿಕ ಅನುಕ್ರಮತೆಯ ಭೇದವು ತೌಲನಿಕ ಅಧ್ಯಯನ ಕ್ರಮದ ಮುಖ್ಯ ತೊಂದರೆಯಾಗಿದೆ.

ಈ ಪುಸ್ತಕದಲ್ಲಿ ಹೇರಳವಾಗಿ ಬಳಸಿಕೊಂಡಿರುವ ಕಾರಂತರ ಕಾದಂಬರಿಯ ಉದ್ಧೃತ ಭಾಗಗಳು ಅನಗತ್ಯವೆನಿಸುತ್ತದೆ. ಅಶೋಕ ಅವರು ಇನ್ನಷ್ಟು ಆಳಕ್ಕಿಳಿದು ಚರ್ಚಿಸಬಹುದಿತ್ತು. ಇಷ್ಟು ತೊಡಕುಗಳಿದ್ದರೂ ಈ ಪುಸ್ತಕದಲ್ಲಿ ಕೆಲವು ಮುಖ್ಯ ಧನಾತ್ಮಕ ಅಂಶಗಳಿವೆ : ಮೊದಲನೆಯದಾಗಿ ಈ ರೀತಿಯ ಚರ್ಚೆಯೂ ಈಗ ಪ್ರಾರಂಭವಾಗುವುದಕ್ಕೆ ಅಶೋಕ ಅವರು ಅವಕಾಶ ಕಲ್ಪಿಸಿದ್ದಾರೆ. ಎರಡನೆಯದಾಗಿ ಕನ್ನಡದ ಮಹತ್ವದ ಕಾದಂಬರಿಕಾರರಾದ ಕಾರಂತರ ಕಾದಂಬರಿಗಳ ಕುರಿತಂತೆ ಈ ರೀತಿಯ ಚರ್ಚೆಯು ಕನ್ನಡಕ್ಕೆ ತೀರಾ ಅಗತ್ಯವಿತ್ತು. ಮೂರನೆಯದಾಗಿ, ಕನ್ನಡದ ಸಂದರ್ಭದಲ್ಲಿ ಈ ಚರ್ಚೆಗಳಿಗೆ ಇರಬಹುದಾದ ಬಹುಮುಖ ಆಯಾಮವನ್ನು ಈ ಪುಸ್ತಕವು ಎತ್ತಿ ತೋರಿಸುತ್ತದೆ. ಒಟ್ಟಿನಲ್ಲಿ ಹೊಸ ರೀತಿಯ ಚರ್ಚೆಗೆ ಟಿ. ಪಿ. ಅಶೋಕ ಅವರು ಅವಕಾಶ ಕಲ್ಪಿಸಿದ್ದಾರೆ.

ಕೇಶವಶರ್ಮ, ಕೆ.

## ನಾ ಕವಿ ಅಲ್ಲ : ಧರಣೇಂದ್ರ ಕುರಕುರಿ

**(ಜಾಗೃತಿ ಪ್ರಕಾಶನ, ಶಿರಸಿ, ೧೯೯೨)**

ಈಗಾಗಲೇ ಧರಣೇಂದ್ರ ಕುರಕುರಿ ಅವರು ಕಾವ್ಯಜಗತ್ತಿಗೆ ಹಳಬರು. 'ಹರಕ ಪುಸ್ತಕ'ದ ಮೂಲಕ ತಮ್ಮನ್ನು ಪರಿಚಯಿಸಿಕೊಂಡ ಇವರು ಈಗ ನಾಲ್ಕನೇ ಕವನ ಸಂಕಲನ 'ನಾ ಕವಿ ಅಲ್ಲ' ನೀಡಿದ್ದಾರೆ. 'ನಾ ಕವಿ ಅಲ್ಲ' ಎಂದು ಘೋಷಿಸಿಕೊಂಡು, (ತಮಾಷೆಯಿಂದ) ೨೯ ಕವಿತೆಗಳನ್ನು ಈ ಸಂಕಲನದ ಮೂಲಕ ಪ್ರಕಟಿಸಿದ್ದಾರೆ. 'ನಾ ಕವಿ ಅಲ್ಲ' ಪದ್ಯದಲ್ಲಿ ತಮ್ಮನ್ನು ತಾವು ಗೇಲಿ ಮಾಡಿಕೊಳ್ಳುತ್ತಾ, ಇಂದಿನ ಕವಿಗಿರಬೇಕಾದ ಜವಾಬ್ದಾರಿಗಳನ್ನು ಹೀಗೆ ಗುರುತಿಸಿದ್ದಾರೆ.

ಕಲ್ಪನಾ ಲೋಕದೊಳಗ ಕುಂತು
ಬದುಕಿಗೆ ಬಣ್ಣಾ ಬಳದು
ಕವಿತಾ ಬರಿಯೋದು
ನನ್ನಿಂದ ಸಾಧ್ಯ ಇಲ್ಲ ;
ಯಾಕಂದ್ರ್ಯಾ ನಾ ಕವಿ ಅಲ್ಲ - -

ವಾಸ್ತವದ ಭೀಕರತೆಯನ್ನು ಬಲು ಸೊಗಸಾಗಿ ಚಿತ್ರಿಸಲಾಗಿದೆ. ಕವಿತೆ ಗದ್ಯದಂತೆ ಕಂಡು ಬಂದರೂ ಸಹ, ತನ್ನ ಆಶಯದಿಂದ ಅದು ಅಭಿವ್ಯಕ್ತಿಸುವ ವಿಷಾದ, ನೋವಿನಿಂದ ಒಂದು ರೂಪಕದ ರೂಪ ಪಡೆಯುತ್ತಿದೆ. ಇಂತಹ ಕಟುಕುವ ಶೈಲಿ ಚಂಪಾರವರನ್ನು ನೆನಪಿಸಿ ಕೊಡುತ್ತದೆ. ಇಂತಹ ತಮಾಷೆ ಮಾಡುವುದರಲ್ಲಿ (ಬರೆಯುವದರಲ್ಲಿ) ಚಂಪಾ ಅಪ್ರತಿಮರೆಂದು ಯಾವ ಎಗ್ಗಿಲ್ಲದೆ ಹೇಳಬಹುದು.

ಇಂದಿನ ಸಮಕಾಲೀನ ಕಾವ್ಯದ ಆಗು ಹೋಗುಗಳು ಹೇಗೆ ಪ್ರಜ್ಞಾವಂತನನ್ನು ಕಾಡ ಹತ್ತುತ್ತವೆ ಎಂಬುದಕ್ಕೆ ಕುರಕುರಿ ಅವರ ಪ್ರಸ್ತುತ ಕವನ ಸಂಕಲನವೇ ಸಾಕ್ಷಿ. ನೇರವಾಗಿ ಚಳುವಳಿಯಲ್ಲಿ ಇವರು ಭಾಗ ವಹಿಸದಿದ್ದರೂ ಸಹ, ಬಂಡಾಯ ಕಾವ್ಯದ ಪ್ರಭಾವದಿಂದ ಮುಕ್ತವಾಗಿಲ್ಲ. ಹೀಗೆ ಮುಕ್ತ ಮನಸ್ಸಿಟ್ಟುಕೊಂಡಾಗ ಮಾತ್ರ ಕಾವ್ಯ ಬೆಳೆಯಲು ಸಾಧ್ಯ. ಇಂತಹ ಆರೋಗ್ಯಕರ ಮನಸ್ಸು ಕುರಕುರಿ ಅವರದಾಗಿದೆ.

ಈ ವ್ಯವಸ್ಥೆಯಲ್ಲಿರುವ ಮೌಢ್ಯ ಹಾಗೂ ವೈರುಧ್ಯಗಳನ್ನು ಸಹಜವಾದ ರೂಪಕಗಳ ಮೂಲಕ ಕಣ್ಣಿಗೆ ಕಟ್ಟುವ ಹಾಗೆ ಈ ಕವಿ ಒಂದು ಕಡೆ ಹೀಗೆ ಚಿತ್ರಿಸುತ್ತಾ.

ನಿನ್ನ ತೇರಿನ ಗಾಲೀ
ಕುರುಡ ನಂಬಿಕೀ ಕೆಸರಾಗ
ಹುಗದೇವಿ
ಇಷ್ಟಾದರೂ ಯುವ್ವಾ
ನಮ್ಮನ್ನ ಅವಚಿಗೊಂಡೇನಂತಿ
ಪ್ರೀತಿ ಸುರುದು ಸಲುವೇನಂತಿ, ಬೆಳಸೇನಂತಿ - - -
( ಯುವ್ವಾ ಭಾರತಿ )

ಇಂತಹ ರಚನೆಗಳ ಮೇಲೆ ಕಂಬಾರ ಹಾಗೂ ಲಂಕೇಶರ ಅಪರೋಕ್ಷ ಪ್ರಭಾವವನ್ನು ಗುರುತಿಸಬಹುದಾಗಿದೆ. 'ಯುವ್ವಾ ಭಾರತಿ' ಒಂದು ಉತ್ತಮ ರಚನೆ. ಆದರೆ ಪ್ರಶ್ನೆ : ಇಲ್ಲಿ ಇವರು ಪರ್ಯಾಯ ಮಾರ್ಗ ಕುರಿತು ಚಿಂತಿಸುವದೇ ಇಲ್ಲ. ಇದು ಕೊರತೆಯಾಗಿ ಪರಿಣಮಿಸಬಹುದೇನೊ ? ಇದೇ ಪದ್ಯದ ಕೊನೆಯ ಸಾಲು ಗಮನಿಸಿರಿ :

ಏನs ಆದರೂ ಯವ್ವಾ
ನಾವೆಲ್ಲರೂ ನಿನ್ನ ಮಕ್ಕಳ
ಅನ್ನೋದ ಸುಳ್ಳ ಆದೀತ ?
ಅದಕ ನಮ್ಮ ತಪ್ಪ ಮನ್ನಿಸ ತಾಯೀ
ಅಂದರ ಯಾಕ ಸುಮ್ಮಕ ಕುಂತೀ ?

'ಬದುಕು ಒಂಥರಾ' 'ಹೊಸ ಹಾಡು' 'ಗೂಳಿ' 'ಗೆಳತೀ ಕಥಿ' 'ಬರಲು ಗಿಡ' ಮುಂತಾದ ಪದ್ಯಗಳು ತುಂಬಾ ಖುಷಿಕೊಡುತ್ತಿವೆ. ಇಲ್ಲಿರುವ ಬದುಕಿನ ಉತ್ಕಟ ಇಚ್ಛೆ ಮೆಚ್ಚುವಂತಹುದು. 'ಶಂಬೂಕ' ಪದ್ಯದಲ್ಲಿ ಕವಿಗಿರುವ ದ್ವಂದ್ವ ಕಾಣಬಹುದಾಗಿದೆ. ಪ್ರಸ್ತುತ ಗೇಲಿ ಮಾಡುತ್ತಾ, ಅಪ್ರಸ್ತುತದ ಬಗ್ಗೆ ಸಹಾನುಭೂತಿ ಉಳ್ಳವರಾಗಿದ್ದರೂ ಸಹ, ಇಲ್ಲಿಯು ಕೆಲವು ಸಾಲುಗಳು ಗುಮಾನಿ ತರುವಂಥವು ಆಗಿವೆ.

ಶಂಬೂಕ !
ಯಾಕೋ ನಿನಗ ಶೋಕ ?
ನಮಗ ಗೊತ್ತೋ
ಧರ್ಮದ ಹೊಗಿಯೊಳಗ
ಉಸರ ಕಟ್ಟಿ
ಆದಿ ನೀನು ಮೂಕ
ಶೋಕ ಮಾಡತೀ ಯಾಕ
ಸುಮು – ಸುಮುಕ ?

ತಮ್ಮ ಆಶಯದ ಬಗೆಗೆ ಖಚಿತತೆ ಇಲ್ಲದಾಗ, ಹೀಗಾಗಬಹುದೇನೋ ? 'ನಡದ ಬಂದ ದಾರಿ' 'ಸಂಬಂಧ' 'ಏನಾಗೇತಿ' 'ಹಸಿವ ಒಡಲು ಒಂದೇ' ಇಂತಹ ತೆಳುವಾದ ರಚನೆಗಳೂ ಇಲ್ಲಿ ಸೇರಿಕೊಂಡಿವೆ.

ಕೊನೆಯಲ್ಲಿ ಒಂದು ಮಾತು : ಧರಣೇಂದ್ರ ಕುರಕುರಿ ಅವರು ಈಗಾಗಲೇ ಎಸ್ಟಾಬ್ಲಿಶ್ ಆದಂತಹ ಒಬ್ಬ ಕವಿ. ಇವರು ಇನ್ನೂ ಹೆಚ್ಚು ಮಹತ್ವಾಕಾಂಕ್ಷೆಯಿಂದ ಬರೆಯುಬೇಕೆನ್ನಿಸುತ್ತದೆ. ನಗರದ ಸಂಪರ್ಕದಿಂದ ಎಷ್ಟೋ ಹಳ್ಳಿಗರು ಆಡುಮಾತನ್ನು ಕಳೆದುಕೊಂಡು ಬರೆಯುತ್ತಿರುವ ಇಂದಿನ ಸಂದರ್ಭದಲ್ಲಿ, ಇವರು ಆಡುಮಾತನ್ನು ಉಳಿಸಿಕೊಂಡದ್ದು ಪ್ರಶಂಸನೀಯ. ಅನುಭವಗಳನ್ನು ತುಂಡು ತುಂಡಾಗಿ ಬರೆಯುವದಕ್ಕಿಂತ, ತುಸುನಿಂತು ಗಾಢವಾಗಿ ಬರೆಯಬೇಕೆನಿಸುತ್ತದೆ. ಇವರ ಆತ್ಮೀಯ ಶೈಲಿ ಓದುಗನ ಒಲವನ್ನು ಗೆದ್ದುಕೊಳ್ಳುವದರಲ್ಲಿ ಯಾವ ಸಂದೇಹವೂ ಇಲ್ಲ.

**ಬಸವರಾಜ ಕುಂಬಾರ**

## ಕಥೆ ಕೇಳು ಗೆಳೆಯಾ : ಸಿದ್ಧರಾಮ ಹೊನ್ಕಲ್

(ಜಾಗೃತ ಪ್ರಕಾಶನ, ಶಹಾಪೂರ, ೧೯೯೧)

ಸಿದ್ಧರಾಮ ಹೊನ್ಕಲ್ ಅವರು ಆರು ಕಥೆಗಳನ್ನೊಳಗೊಂಡ "ಕಥೆ ಕೇಳು ಗೆಳೆಯಾ" ಕಥಾ ಸಂಕಲನ ಪ್ರಕಟಿಸಿದ್ದಾರೆ. ಈಗಾಗಲೇ ನಾಡಿನ ಹಲವಾರು ಪತ್ರಿಕೆಗಳಲ್ಲಿ ಕಾವ್ಯ, ಹನಿಗವನಗಳ ಮೂಲಕ ತಮ್ಮನ್ನು ಗುರುತಿಸಿಕೊಂಡ ಹೊನ್ಕಲ್ ಅವರು ಉತ್ತಮ ಲಲಿತ ಪ್ರಬಂಧಗಳನ್ನೂ ಕೊಟ್ಟಿದ್ದಾರೆ.

ಈ ಕಥಾ ಸಂಕಲನ ಓದಿ ಮುಗಿಸಿದಾಗ ಎರಡು ಸಂಗತಿಗಳು ಸ್ಪಷ್ಟವಾಗಿ ಗಮನಕ್ಕೆ ಬರುತ್ತವೆ. ಒಂದು, ಲೇಖಕರು ಬಂಡಾಯ ಸಾಹಿತ್ಯ ಚಳುವಳಿಯಿಂದ ಗಾಢವಾಗಿ ಪ್ರಭಾವಿತರಾದದ್ದು. ಎರಡು : ಬಂಡಾಯ ಸಾಹಿತ್ಯ ಚಳುವಳಿಯ ಪ್ರತಿಭಟನಾತ್ಮಕ ಧೋರಣೆಯ ಸಾಧ್ಯತೆಯನ್ನು ವಾಸ್ತವ ಬದುಕಿನಲ್ಲಿ ಒರೆಗಲ್ಲಿಗೆ ಹಚ್ಚಿ ನೋಡುತ್ತಿರುವದು.

ಸಂಕಲನದಲ್ಲಿಯ ಮೊದಲ ಕತೆ 'ಕಾದಿರುವಳು ಶಕುಂತಲೆ ದುಷ್ಯಂತ ಬರುವನೆಂದು' ವರದಕ್ಷಿಣೆಯ ಶಾಪದಿಂದ ಆಳದಲ್ಲಿ ನೋವನ್ನು ತುಂಬಿಕೊಂಡ ಇಬ್ಬರು ಗೆಳತಿಯರ ಗೋಳಿನ ಕತೆ.

ಕ್ರಾಂತಿಕಾರಿ ಸಾಹಿತ್ಯ ಓದಿದ ಯುವಕ ನಿಜಜೀವನದಲ್ಲೂ ಪ್ರತಿಭಟಿಸಲು ಹೋದ ಪರಿಣಾಮ "ಕಥೆ ಕೇಳು ಗೆಳೆಯಾ" ಚಿತ್ರಿಸಿದರೆ, "ಪಾಪಪ್ರಜ್ಞೆ"— ಕಥೆ ಬದುಕನ್ನು ತುಸು ಭಿನ್ನ ನೆಲೆಯಲ್ಲಿ ನಿಂತು ನೋಡುತ್ತದೆ.

ಸಂಕಲನದಲ್ಲಿಯೇ ಅತ್ಯಂತ ಮನೋಜ್ಞವಾಗಿ ಚಿತ್ರಿತವಾದ ಕತೆಯೆಂದರೆ "ಪಾಪ ಪ್ರಜ್ಞೆ".

'ಸ್ಥಿತಿಗತಿ' ನಿರುದ್ಯೋಗಿ ಯುವಕನೊಬ್ಬ ಹೊರನಾಡಿನಲ್ಲಿ ಉದ್ಯೋಗ ಅರಸಲು ಹೋದಾಗ, ಕನ್ನಡದವನು ಎಂಬ ಒಂದೇ ಕಾರಣಕ್ಕೆ ಅರ್ಹತೆಯಿದ್ದರೂ ಉದ್ಯೋಗ ಸಿಗದೇ ಆತ್ಮಹತ್ಯೆ ಮಾಡಿಕೊಂಡ ದುರಂತದ ಕತೆ. ಓದುಗರಿಗೆ ವಿಷಾದ ಕಟ್ಟಿಕೊಡುವಲ್ಲಿ ಲೇಖಕರ ನಿರೂಪಣಾ ವಿಧಾನ ಪರಿಣಾಮಕಾರಿ ಎನಿಸುತ್ತದೆ. ಸಂಕಲನದಲ್ಲಿರುವ ಇನ್ನೆರಡು ಕತೆಗಳಾದ "ಹೀಗೊಂದು ಪ್ರೇಮ ಪ್ರಕರಣ" ಮತ್ತು "ದುರಂತದ ಬೆನ್ನು ಹತ್ತಿ" ಕತೆಗಳ ನಿರೂಪಣೆ, ಶೈಲಿ, ತಂತ್ರ ಭಾಷಾ ಬಳಕೆಯ ದೃಷ್ಟಿಯಿಂದ ಉತ್ತಮವೆನಿಸಿದರೂ ನಿರೀಕ್ಷಿತ ತಿರುವು ಮತ್ತು ಮಾಮೂಲಿ ಪ್ರೇಮ ಕತೆಗಳ ಹಳಸಲು ಸಾಮಗ್ರಿ ತುಂಬಿಕೊಂಡಿರುವದರಿಂದ ಗಮನಾರ್ಹವೆನಿಸುವುದಿಲ್ಲ.

ಹೊನಕಲ್ಲರ ಮನೋಧರ್ಮ ಬಂಡಾಯದ್ದಾಗಿದ್ದರೂ ಬದುಕಿನ ಸಮಗ್ರ ಅನುಭವಗಳನ್ನು ನಿರಾಕರಿಸುವುದಿಲ್ಲ. ಬದುಕಿನ ಬಗ್ಗೆ ಆರೋಗ್ಯಕರ ನಿಲುವು ತಾಳುತ್ತಾರೆ. ಕ್ರಾಂತಿ, ಹೋರಾಟ, ಆದರ್ಶಗಳಿಗಿರುವ ಹಲವು ಸಾಧ್ಯತೆಗಳನ್ನು ಗೌಣಗೊಳಿಸುವದಿಲ್ಲ. ಲೇಖಕರು ಬಳಸುವ ಭಾಷೆ, ಶೈಲಿ, ತಂತ್ರದಿಂದಾಗಿ ಕತೆಗಳು 'ಓದಿಸಿಕೊಂಡು' ಹೋಗುತ್ತವೆ. ಓದುಗನ ಮೇಲೆ ಆ ಕ್ಷಣಕ್ಕೆ ಪರಿಣಾಮವೂ ಉಂಟು ಮಾಡುತ್ತವೆ. ಆದರೆ ಕತೆ ಹೇಳುತ್ತಾ ಕತೆಗೆ ಒಂದು ಆವರಣ ಕಲ್ಪಿಸುವಲ್ಲಿ, ಬದುಕನ್ನು ಸೂಕ್ಷ್ಮವಾಗಿ ನಿರೀಕ್ಷಿಸುವಲ್ಲಿ, ಕತೆಗಳನ್ನು ಕಲಾತ್ಮಕವಾಗಿ ಕಟ್ಟಿಕೊಡುವಲ್ಲಿ ಸೋಲುತ್ತಾರೆ. ಕತೆ ಹೇಳುವ ಉತ್ಸಾಹದಲ್ಲಿ ಮಾತುಗಳು ಜಾಸ್ತಿಯಾಗಿ ಕ್ರಿಯೆ ಕುಂಠಿತಗೊಳ್ಳುತ್ತದೆ.

ಕೆಲವೊಂದು ಮಿತಿಗಳಲ್ಲೂ "ಕತೆ ಕೇಳು ಗೆಳೆಯಾ" ಕಥಾ ಸಂಕಲನ ಅರ್ಥಪೂರ್ಣ ಪ್ರಯತ್ನ, ಓದಲೇಬೇಕಾದ ಕೃತಿ.

**ರಾಜಶೇಖರ ಹತಗುಂದಿ**

## ಅನನ್ಯ ಸಮಾಜವಾದಿ ಲೋಹಿಯಾ : ಬಿ. ಎಂ. ಹನೀಫ್
(ದೇವಗಿರಿ ಪ್ರಕಾಶನ ಬಿಜಾಪೂರ, ೧೯೯೨)

ಡಾ. ರಾಮಮನೋಹರ ಲೋಹಿಯಾ ಇಂಡಿಯಾ ಕಂಡ ಪ್ರಖರ ವಿಚಾರವಾದಿಗಳಲ್ಲೊಬ್ಬರು. ಸಾಮಾಜಿಕ, ರಾಜಕೀಯ, ಆರ್ಥಿಕ, ಚಿಂತನೆಗಳು ಹಲವು ವಿಧದಲ್ಲಿ ಪರಿಣಾಮ ಬೀರಿ ಲೋಹಿಯಾ ವಿಚಾರಧಾರೆ 'ವಾದವಾಗಿ' ಮಾನ್ಯತೆ ಪಡೆದಿದೆ.

ಲೋಹಿಯಾರ ಬದುಕು, ಚಿಂತನೆ ಕುರಿತಂತೆ ಈ ಪುಟ್ಟ ಪುಸ್ತಕದಲ್ಲಿ ಯುವ ಪತ್ರಕರ್ತ, ವಿಚಾರವಾದಿ, ಬಿ. ಎಂ. ಹನೀಫ್ ಅವರು ಮಾಹಿತಿಗಳನ್ನು ಸಂಗ್ರಹವಾಗಿ ನೀಡಿದ್ದಾರೆ.

ಲೋಹಿಯಾರ ಸಂಕ್ಷಿಪ್ತ ಜೀವನ, ಲೋಹಿಯಾ, ಕೆಲವು ಘಟನೆಗಳು, ಮತ್ತು ಲೋಹಿಯಾ ಹೇಳಿದ್ದು, ಹೀಗೆ ಮೂರು ಭಾಗಗಳಲ್ಲಿ ಹಲವು ಉಪಯುಕ್ತ ಮಾಹಿತಿಗಳನ್ನು ಹನೀಫ್ ನೀಡಿದ್ದಾರೆ. ಇದೊಂದು ಪುಟ್ಟ ಪುಸ್ತಕ. ಲೋಹಿಯಾ ಬಗ್ಗೆ ಏನೂ ಗೊತ್ತಿಲ್ಲದವರಿಗೆ ಪ್ರಾಥಮಿಕ ಪರಿಚಯ ನೀಡುತ್ತದೆ.

ಪೂರ್ಣಚಂದ್ರ ತೇಜಸ್ವಿ, ಕೆ. ವಿ. ಸುಬ್ಬಣ್ಣ, ಹಸನ ನಯೀಮ ಸುರಕೋಡ, ಕೆಲವು ಲೇಖಕರು ವ್ಯಾಪಕವಾದ ದೊಡ್ಡ ಯತ್ನಗಳನ್ನು ಮಾಡಿದ್ದಾರೆ. ಲೋಹಿಯಾ

ವಿಚಾರ ಸರಣಿ ಬೆಳೆಯುವಲ್ಲಿ ಲೋಹಿಯಾರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟಿದ್ದಾರೆ. ಅಂಥ ಯತ್ನಗಳಿಗೆ ಹೋಲಿಸಿದಾಗ ಇದೊಂದು ಸಣ್ಣ ಪ್ರಯತ್ನ ಮಾತ್ರ.

ಲೋಹಿಯಾ ಚಿಂತನೆಗಳನ್ನು ದಾಖಲಿಸಿ ಅವುಗಳ ಬಗ್ಗೆ ಚರ್ಚಿಸುವ ಫಲವಾಗಿ ಸಿಗುವ ಲಾಭ ದೊಡ್ಡದು. ಅಂಥ ಲಾಭ ಈ ಕೃತಿಯಿಂದ ಸಿಕ್ಕಿಲ್ಲ. ಇದು ಲೇಖಕರ ಗುರಿಯೂ ಅಲ್ಲ. ಲೋಹಿಯಾ ಚಿಂತನೆಗಳನ್ನು ಅರ್ಥೈಸುವ ಗಂಭೀರ ಪ್ರಯತ್ನ ಹನೀಫ್‌ರ ಮುಂದಿನ ಕೃತಿಗಳಲ್ಲಿ ಮೂಡಲಿ.

**ಸತೀಶ ಕುಲಕರ್ಣಿ**

---

**ಚಂದಾದಾರರಲ್ಲಿ ಮನವಿ**

೧೯೯೪ ರ ಮೂರನೇಯ ಸಂಚಿಕೆ ಇದು. ನೀವೆಲ್ಲ ಚಂದಾ ಕಳಿಸುವಿರೆಂಬ ಭರವಸೆಯಿಂದ ಸಂಚಿಕೆಗಳನ್ನು ಕಳಿಸುತ್ತಲೇ ಇದ್ದೇವೆ. ಈ ಭರವಸೆ ಹುಸಿಯಾಗದಂತೆ ನೀವೆಲ್ಲ ೧೯೯೪ ರ ಚಂದಾವನ್ನು ನಾಳೆ ನಾಳೆ ಎಂದು ಮುಂದೂಡದೆ ಬೇಗ ಕಳಿಸಿರಿ. ನಾಳೆ ಬಪ್ಪುದು ನಮಗಿಂದೇ ಬರಲಿ.

**ಸಂಪಾದಕ**

---



---

## ಈ ಸಂಚಿಕೆಯ ಲೇಖಕರು

**ಡಾ. ಎಂ. ಎಂ. ಕಲಬುರ್ಗಿ** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩ **ಡಾ ಹಿ. ಶಿ. ರಾಮಚಂದ್ರೇಗೌಡ** ಜಾನಪದ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೬ **ಬಿ. ಎಸ್. ದುಂಡರಡ್ಡಿ** ನಾಗಶೆಟ್ಟಿ ಚಾಳ, ಕಂಠಿ ಸರ್ಕಲ್, ಇಳಕಲ್ ೫೮೭೧೨೫ **ಡಾ. ಶಿವರಾಮ ಪಡಿಕ್ಕಲ್** ಸೆಂಟ್ರಲ್ ಯುನಿವರ್ಸಿಟಿ, ಹೈದ್ರಾಬಾದ ೫೦೦೧೩೪ **ಬಿ. ಟಿ. ಲಲಿತಾ ನಾಯಕ** ನಂ. ೨೨, ಕ್ರಾಂತಿಪಥ, ೧ನೇ ಮೇನ್, ೨ನೇ ಕ್ರಾಸ್, ರಾಜಮಹಲ ವಿಲಾಸ, ೨ನೇ ಹಂತ, ಬೆಂಗಳೂರು ೯೪ **ಎಚ್. ನಾಗರಾಜಪ್ಪ** ಉ. ಸಂಪಾದಕ, ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದಿಲ್ಲಿ ೧೬ **ಪಿ. ಆಂಜನೇಯ** c/o ಹೋಟೇಲ **ಮಾರುತಿ.** ಪಂತರ ಪಾಳ್ಯ. ನಾಯಂಡ ಹಳ್ಳಿ ಅಂಚೆ, ಬೆಂಗಳೂರು ೩೯ **ಎಂ. ಈಶ್ವರ ಶರ್ಮಾ** ಎಂ ಬಿ ಆರ್ ಕಾಲೇಜು, ಸಿರಿಗೆರೆ ೫೭೭೫೪೧ **ಪಿ. ಎಸ್. ಪಾಟೀಲ** ವಕೀಲರು, ಅಕ್ಕಮಹಾದೇವಿ ಕ್ರಾಸ್, ಬಿಜಾಪುರ ೧ **ಶಾಂತರಸ** ಆಜಾದನಗರ ರಾಯಚೂರು ೧ **ಡಾ. ರಹಮತ ತರೀಕೆರೆ** ಕನ್ನಡ ವಿಶ್ವವಿದ್ಯಾಲಯ. ಹಂಪಿ ೫೮೩೨೨೧ **ಡಾ. ಎಂ. ಆರ್. ಮಂದಾರವಲ್ಲಿ** c/o ಜಿ. ಕೆ. ರವೀಂದ್ರ ಕುಮಾರ, ಆಕಾಶವಾಣಿ, ಕಾರವಾರ **ಡಾ ಎಸ್. ವಿ. ಪ್ರಭಾವತಿ** ಬಿ ಎಸ್. ವಿ. ಪಿ. ಮಹಿಳಾ ಕಾಲೇಜು, ವಿಜಯನಗರ, ಬೇಂಗಳೂರು ೪೦ **ಡಾ. ಆರ್ಕೆ, ಮಣಿಪಾಲ** ೧೨೮, ಎಂಐಜಿ ಹುಡ್ಕೋ, ಮಣಿಪಾಲ ೫೭೬೧೧೯ **ಕುವಿಪ್ರ** (ಡಾ. ಪಿ. ವಿ. ಕುಲಕರ್ಣಿ) ಎಂ. ಕೆ. ಯುನಿವರ್ಸಿಟಿ, ಮದುರೈ ೬೨೫೦೨೧ **ಬೋರೇಗೌಡ ಚಿಕ್ಕಮರಳಿ** ಹಿರೇಮರಳಿ (ಮಂಡ್ಯ) ೫೭೧೪೩೪ **ಡಾ. ಕೇಶವ ಶರ್ಮ ಕೆ.** ಕನ್ನಡ ವಿಭಾಗ, ಕುವೆಂಪು ವಿ. ವಿ, ಬಿ ಆರ್. ಪಿ. ೫೭೭೧೧೫ **ಡಾ. ಬಸವರಾಜ ಕುಂಬಾರ** ಜಿ. ಎಚ್. ಕಾಲೇಜು, ಹಾವೇರಿ ೫೮೧೧೧೦ **ರಾಜಶೇಖರ ಹತಗುಂದಿ** ಸಿರಾಡೋಣ, ಕುರಿಕೋಟಾ (ಗುಲಬರ್ಗಾ) **ಸತೀಶ ಕುಲಕರ್ಣಿ** ವಿದ್ಯಾನಗರ, ಹಾವೇರಿ ೫೮೧೧೧೦.

# FROM IV (See Rule 8)

Statement of ownership and particulars of
SANKRAMANA

1. Place of Pub ication — DHARWAD
2. Periodicity of Publication — Monthly
3. Printer's Name — Neela Patil
   Whether citizen of India ? — Yes
   Address — Sankramana Prakashana
   DHARWAD - 580001
4. Publisher's Name —
   Whether cit zen of India ? As in 3 above
   Address
5. Editor's Name
   Whether citizen of India ? — As in 3 above
   Address
6. Name and adresses of the Individuals who own the news paper and partners or Shareholders holding more than one percent of the to - tal capital — As in 3 above
7. Printer's Name —
   Nationality — As in 3 above
   Address —

I, Neela Patil, hereby declare that the particulars given above are true to the best of my knowledge and belief.

Dharwad
1-3-1994

Sd/-( Neela Patil)
Signature of Publisher